ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ



# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

₹ 14

ಏಪ್ರಿಲ್ 2017



# ವಿವೇಕಪ್ರಭ

ಏಪ್ರಿಲ್-2017 ಸಂಪುಟ 18 ಸಂಚಿಕೆ 04



## ವಿಶೇಷ ಲೇಖನ



## ಧಾರಾವಾಹಿ












**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಆತ್ಮಜ್ಞಾನಂದ*

**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*


**ಮುಖಪುಟ:**
ರಾಮ ಹರೇ ಜಯ ರಾಮ ಹರೇ

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505


**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳು ಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

## ಪ್ರಾರ್ಥನೆ

# ಉಪನಿಷನ್ಮಾತೆ

ಕರ ಮುಗಿದು ಬೇಡುವೆನು ಉಪನಿಷನ್ಮಾತೆ
ಪರದ ದರುಶನ ತೋರು ವಿಶ್ವನುತವಿಖ್ಯಾತೆ ॥ ಪ ॥

ಆರು ನಾನೆಂಬುದನ್ನುತ್ತರಿಪ ಶಕ್ತಿಯುತೆ
ಪಾರಮಾರ್ಥವ ಪೇಳ್ವ ಜ್ಞಾನಸಂಪದ್ಭರಿತೆ
ಚಾರುತತ್ತ್ವವನೊರೆವ ಸಾರಜನಸಂಪ್ರೀತೆ
ಧಾರುಣಿಯ ಮೇಲ್ನಿನಗೆ ಸಮನಾರು ಸದ್ವನಿತೆ ॥ ೧ ॥

ಹಿಂದೆ ಮನುಕುಲವರಸಿ ಕಂಡ ಶಾಶ್ವತ ಸತ್ಯ
ಕುಂದದಾನಂದವನು ಕೊಡುವ ತವನಿಧಿ ತಥ್ಯ
ಸುಂದರವೆ ಶಿವನೆಂದು ಸಾರಿ ಪೇಳುವೆ ನಿತ್ಯ
ಬಂಧುರದ ಮುಕ್ತಿಪಥ ತೋರುವುದೆ ತವ ಕೃತ್ಯ ॥ ೨ ॥

ಸರ್ವರಿಗುಮಾನಂದವೀವ ಸೊಗಮೆಸೆವ ಗಣಿ
ಉರ್ವಿಜನರೆಲ್ಲರನ್ನೊಂದಾಗಿ ಕಾಣ್ಬ ಗುಣಿ
ಗರ್ವಿಜನಕಾರ್ಬೊನ್ನ ಪೊನ್‌ಗೈವ ಪರುಷಮಣಿ
ಶರ್ವನೆಡೆಗೆಳೆದೊಯ್ವ ಮುಕ್ತ್ಯಂಗನಾತರುಣಿ ॥ ೩ ॥

ನಿಗಮಾಂತ್ಯದೊಳ್ ನಲಿವ ಮುನಿವೃಂದಮುಖಜಾತೆ
ಬಗೆಗೊಳಿಸುವಾನಂದ ತರುವ ರಸಮಯ ಗೀತೆ
ಜಗದ ಮರ್ಮವನೊರೆವ ಅಧ್ಯಾತ್ಮ ರಸಗವಿತೆ
ಭಗವಂತನಂ ಬೆರೆವ ಬಟ್ಟೆದೋರೆಲೆ ಪೂತೆ ॥ ೪ ॥

ಜೀವಪರವೆಂದಿಗೂ ಎರಡಲ್ಲವೆಂಬುದನು
ತೀವಿದತಿಸುಲಭದಿಂದೊರೆವ ಅದ್ವೈತವನು
ಸಾವು ಹುಟ್ಟನು ಗೆಲ್ವ ಮಾರ್ಗದೋರುವ ನೀನು
ಕಾವುದೌ ಮನುಕುಲವನೊರೆದು ಸತ್ಯಾರ್ಥವನು ॥ ೫ ॥

– ಕುಮಾರ ನಿಜಗುಣ



## ಸೂಕ್ತಿಪ್ರಭ

**ಜ**ಗತ್ತಿನಿಂದ ಓಡಿಹೋಗುವ ಮೂಲಕ, ಹಲವು ಸಂಗತಿಗಳಿಂದ ತಪ್ಪಿಸಿಕೊಳ್ಳುವ ಮೂಲಕ, ಪ್ರಪಂಚದಿಂದ ದೂರವಾಗಿ ಏಕಾಂಗಿಯಾಗಿರುವ ಮೂಲಕ ಆಧ್ಯಾತ್ಮಿಕತೆಯನ್ನು ಕಲಿತುಕೊಳ್ಳಲಾಗದು. ನಾವು ಎಲ್ಲೇ ಇರಲಿ, ಯಾರೊಂದಿಗೇ ಇರಲಿ, ಅಂತರಂಗದಲ್ಲಿ ಏಕಾಂತತೆಯನ್ನು ಕಾಣಲು ಕಲಿಯಬೇಕು. ವಸ್ತುಗಳನ್ನು ಭೇದಿಸಿ, ಅವುಗಳ ಆಳದಲ್ಲಿರುವ ದೇವರನ್ನು ಕಾಣಲು ನಾವು ಕಲಿಯಬೇಕು.

–ಮೇಯಿಸ್ಟರ್ ಎಕಾರ್ಟ್

**ಕ**ತ್ತಲೆಯಿಂದ ಕತ್ತಲನ್ನುಓಡಿಸಲಾಗದು. ಬೆಳಕು ಮಾತ್ರ ಆ ಕೆಲಸ ಮಾಡಬಲ್ಲುದು. ದ್ವೇಷವು ದ್ವೇಷವನ್ನು ಹೋಗಲಾಡಿಸದು, ಪ್ರೀತಿಯೊಂದೇ ಅದನ್ನು ಹೋಗಲಾಡಿಸುವುದು.

–ಮಾರ್ಟಿನ್ ಲೂಥರ್ ಕಿಂಗ್ (ಜೂನಿಯರ್)

**ಪ್ರ**ಪಂಚದಲ್ಲಿ ಶಾಂತಿ ಆಳಬೇಕಾದರೆ ಜನರು ಹೊಸ ಬಗೆಯಲ್ಲಿ ವಿಕಾಸ ಹೊಂದಬೇಕು. ಅವರು ಎಲ್ಲವನ್ನೂ ಸಮಗ್ರವಾಗಿ ನೋಡಲು ಕಲಿಯಬೇಕು.

– ಇಮ್ಯಾನ್ಯುವೆಲ್ ಕ್ಯಾಂಟ್

**ನ**ಮ್ಮ ಹಿಂದೆ ಏನಿದೆ, ನಮ್ಮ ಮುಂದೆ ಏನಿದೆ ಎಂಬುದು ಮುಖ್ಯವಲ್ಲ. ನಮ್ಮ ಒಳಗೇನಿದೆ ಎಂಬುದೇ ಅತ್ಯಂತ ಮುಖ್ಯವಾದದ್ದು.

– ರಾಲ್ಫ್ ವಾಲ್ಡೊ ಎಮರ್ಸನ್

**ಮಾ**ನವನು ತನ್ನ ಮನೋಭಾವವನ್ನು ಬದಲಾಯಿಸುವ ಮೂಲಕ ತನ್ನ ಜೀವನವನ್ನೇ ಬದಲಾಯಿಸಿಕೊಳ್ಳಬಲ್ಲ. ಇದು ಮಾನವನ ಯಾವುದೇ ಕಾಲದ ಅತ್ಯದ್ಭುತವಾದ ಸಂಶೋಧನೆ.

–ವಿಲಿಯಂ ಜೇಮ್ಸ್



**ರಾಮಕೃಷ್ಣ ಮಿಷನ್, ಪೊಂಡಾ, ಗೋವಾ**

*(Reverside Centre)*

**Parsol, P.O.Khadepar Branch Office, Inside From Khursakade Bus Stop,**
**After Chowgule Maruti Service, PONDA, GOA - 403406**
**Mob: 09414042638** Website: www.rkmgoa.org

# ಒಂದು ಮನವಿ

ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತದಾದ್ಯಂತ ಸಂಚರಿಸುತ್ತಿದ್ದಾಗ ಗೋವಾದ ಮಡಗಾಂವ್‌ಗೆ 1892ರ ಅಕ್ಟೋಬರ್ 27ರಂದು ಬಂದರು. ಅಲ್ಲಿನ ಪ್ರಸಿದ್ಧ ವಿದ್ವಾಂಸರು ಹಾಗೂ ಭಕ್ತರಾಗಿದ್ದ ಶ್ರೀ ಸುಬ್ರಾಯ ನಾಯಕ್ ಅವರು ಸ್ವಾಮೀಜಿಯವರನ್ನು ಆದರದಿಂದ ಬರಮಾಡಿಕೊಂಡು, ತಮ್ಮ ನಿವಾಸದಲ್ಲೇ ಅವರ ವಸತಿಗೆ ವ್ಯವಸ್ಥೆ ಮಾಡಿಕೊಟ್ಟರು. ಸ್ವಾಮೀಜಿ ಗೋವೆಯ ಶಾಂತದುರ್ಗಾ ದೇವಾಲಯ, ಮಹಾಲಸಾ ದೇವಾಲಯ ಹಾಗೂ ಮಂಗೇಶ ದೇವಾಲಯಗಳನ್ನು ಸಂದರ್ಶಿಸಿದರು. ಅವರು ಪಣಜಿ ನಗರವನ್ನು ಕೂಡ ಸಂದರ್ಶಿಸಿದರು. ಸ್ವಾಮೀಜಿ ಗೋವೆಯ ಕ್ರೈಸ್ತ ದೇವಾಲಯಗಳನ್ನು ಸಂದರ್ಶಿಸಿ, ಅಲ್ಲಿ ಹಳೆಯ ಲ್ಯಾಟಿನ್ ಧರ್ಮಗ್ರಂಥಗಳ ಅಧ್ಯಯನ ಮಾಡಿದರು.

ಭಕ್ತರುಗಳಿಂದ ನಿರ್ವಹಿಸಲ್ಪಡುವ '**ರಾಮಕೃಷ್ಣ-ವಿವೇಕಾನಂದ ಸೇವಾ ಸಮಿತಿ**'ಯು 1996ರಲ್ಲಿ ಮಡಗಾಂವ್‌ನಲ್ಲಿ ಆರಂಭವಾಯಿತು. ಮುಂದೆ ಈ ಸಮಿತಿಯ ಚಟುವಟಿಕೆ ವ್ಯಾಪಕಗೊಂಡು, 2006ರಲ್ಲಿ ಆರು ಎಕರೆ ಜಮೀನನ್ನು ಪಡೆಯಿತು. ಈ ಸಮಿತಿಯು ದಿವ್ಯತ್ರಯರ ಜೀವನ, ಸಂದೇಶಗಳ ಪ್ರಚಾರವಲ್ಲದೆ ಯುವಕರಿಗಾಗಿ ವ್ಯಕ್ತಿತ್ವ ವಿಕಸನ, ವಿವಿಧ ಸ್ಪರ್ಧೆಗಳು ಹಾಗೂ ಅನೇಕ ಶಿಬಿರಗಳನ್ನು ನಡೆಸುತ್ತ ಬಂದಿದೆ.

ಸಮಿತಿಯ ಕೋರಿಕೆಯ ಮೇರೆಗೆ ರಾಮಕೃಷ್ಣ ಮಹಾಸಂಘವು ಗೋವೆಯನ್ನು ರಾಮಕೃಷ್ಣ ಮಿಷನ್ನಿನ ಅಧಿಕೃತ ಶಾಖಾಕೇಂದ್ರವನ್ನಾಗಿ ಮಾಡಿಕೊಳ್ಳಲು ಒಪ್ಪಿಕೊಂಡಿದೆ. ಪ್ರಸ್ತುತ ಹಸ್ತಾಂತರ ಕಾರ್ಯದ ಅಧಿಕೃತ ಕೆಲಸಗಳು ತ್ವರಿತವಾಗಿ ನಡೆಯುತ್ತಿವೆ.



PROJECT -1 VIVEKANANDA CULTURAL CENTRE

PROSPECTIVE VIEW OF THE UPCOMING BUILDING

SAMITI'S SIX ACRES OF LAND

**ರಾಮಕೃಷ್ಣ ಮಿಷನ್, ಪೊಂಡಾ, ಗೋವಾ ಇದರ ಹೊಸ ಯೋಜನೆಗಳು :**

**1.** ಭಕ್ತ ದಂಪತಿಗಳೊಬ್ಬರ ಉದಾರ ನೆರವಿನಿಂದ ರಾಮಕೃಷ್ಣ ಮಿಷನ್ನಿಗೆ 471 ಮೀ.ಚದರಳತೆಯ ಜಮೀನು ಪ್ರಾಪ್ತವಾಗಿದ್ದು, ಇದು **ಪೊಂಡಾ** ಪಟ್ಟಣದ ಪ್ರಧಾನ ಭಾಗದಲ್ಲಿರುವ ದಾದಾ ವೈದ್ಯ ಚೌಕದಲ್ಲಿದೆ. ಇಲ್ಲಿ ಮಿಷನ್ 'ವಿವೇಕಾನಂದ ಸಾಂಸ್ಕೃತಿಕ ಕೇಂದ್ರ'ವನ್ನು ಸ್ಥಾಪಿಸಲು ಮೂರು ಅಂತಸ್ತಿನ ಕಟ್ಟಡವೊಂದನ್ನು ನಿರ್ಮಿಸಲು ಉದ್ದೇಶಿಸಿದೆ. ಇದರಲ್ಲಿ ಸಾಂಸ್ಕೃತಿಕ ಭವನ, ಪುಸ್ತಕ ಮಾರಾಟ ಮಳಿಗೆ, ಯೋಗ ತರಬೇತಿ ಕೊಠಡಿ, ಕಂಪ್ಯೂಟರ್ ಕಲಿಕಾ ಕೇಂದ್ರ ಇತ್ಯಾದಿಗಳು ನಡೆಯಲಿವೆ. ಇದು ಗೋವಾ ರಾಮಕೃಷ್ಣ ಮಿಷನ್ನಿನ ನಗರ ಕೇಂದ್ರವಾಗಿದೆ.

**2.ರಾಮಕೃಷ್ಣ-ವಿವೇಕಾನಂದ ಸಮಿತಿಗೆ ಸಮೀಪವಿರುವ ಜಮೀನಿನಲ್ಲಿ:** ಸಮಿತಿಗೆ ಸಮೀಪದಲ್ಲಿ ಭಕ್ತರೊಬ್ಬರು ಮಿಷನ್ನಿಗೆ 371ಮೀ.ಚದರಳತೆಯ ಭೂಮಿಯನ್ನು ನೀಡಿದ್ದು, ಇಲ್ಲಿ ಮಿಷನ್ 10 ಕೋಣೆಗಳಿಂದ ಕೂಡಿದ ಕಚೇರಿಯ ಕಟ್ಟಡವನ್ನು ನಿರ್ಮಿಸಲು ಉದ್ದೇಶಿಸಿದೆ. ಮುಂದೆ ಈ ಭೂಮಿಯು ಸಮಿತಿಯಿಂದ ಹಸ್ತಾಂತರಿಸಲಾಗುವ ಭೂಮಿಯೊಂದಿಗೆ ವಿಲೀನಗೊಂಡು, ಒಂದೇ ವಠಾರದಲ್ಲಿ ನೆಲೆಗೊಳ್ಳುವುದು. ಇಲ್ಲಿ ಒಂದು ಸಣ್ಣ ಪ್ರಾರ್ಥನಾ ಮಂದಿರ, ಪುಸ್ತಕ ಮಾರಾಟ ಮಳಿಗೆ ಹಾಗೂ ಕಚೇರಿ ಇವನ್ನು ನಿರ್ಮಿಸಲಾಗುವುದು.

**3. ಸಮಿತಿ ಹಸ್ತಾಂತರಿಸುವ ಆರು ಎಕರೆ ಜಮೀನಿನಲ್ಲಿ** ಹಂತಹಂತವಾಗಿ ಈ ಸೇವಾಕಾರ್ಯಗಳನ್ನು ಕೈಗೊಳ್ಳಲು ಮಿಷನ್ ಯೋಜನೆ ಹಾಕಿಕೊಂಡಿದೆ: * ಶ್ರೀರಾಮಕೃಷ್ಣರ ವಿಶ್ವಭಾವೈಕ್ಯ ಮಂದಿರ * ಚಿಕಿತ್ಸಾಲಯ * ಬಾಲಕ ಸಂಘ * ಆಧ್ಯಾತ್ಮಿಕ ಶಿಬಿರ * ಬಾಲಕರ ವಿದ್ಯಾರ್ಥಿ ನಿಲಯ * ಸಾಧು ನಿವಾಸ * ಸಾಂಸ್ಕೃತಿಕ ಭವನ

ಈ ಯೋಜನೆಗಳಿಗೆ ತಗಲುವ ವೆಚ್ಚ: ಯೋಜನೆ 1– 200 ಲಕ್ಷ ರೂ.; ಯೋಜನೆ 2– 66ಲಕ್ಷ ; ಯೋಜನೆ 3– ಪ್ರಗತಿಯಲ್ಲಿದೆ.

ಸ್ನೇಹಿತರೇ, ಈ ಎಲ್ಲ ಯೋಜನೆಗಳ ಒಟ್ಟು ಮೊತ್ತವನ್ನು ಸದ್ಯದಲ್ಲೇ ನಾವು ಸಂಪೂರ್ಣವಾಗಿ ಅಂದಾಜಿಸಲಿದ್ದೇವೆ. ಒಟ್ಟಿನಲ್ಲಿ, ಅನೇಕ ಕೋಟಿ ರೂ. ಮೊತ್ತದ ಈ ಯೋಜನೆಗಳಿಗೆ ಎಲ್ಲ ಭಕ್ತರ, ಹಿತೈಷಿಗಳ ಹಾಗೂ ಉದಾರ ದಾನಿಗಳ ನೆರವು ಅತ್ಯಂತ ಅಗತ್ಯವಾಗಿದೆ. ಈ ಮಹಾಕಾರ್ಯದಲ್ಲಿ ನೆರವಾಗುವ ಎಲ್ಲರಿಗೂ ದಿವ್ಯತ್ರಯರ ಕೃಪಾಶೀರ್ವಾದಗಳು ಲಭಿಸುವುದೆಂಬ ನಂಬಿಕೆ ನಮ್ಮದು. ತಾವು ನೀಡಬಯಸುವ ದೇಣಿಗೆಯ ಮೊತ್ತವನ್ನು ನಗದು/ಚೆಕ್/ಡಿ.ಡಿ.ಮೂಲಕ '**RAMAKRISHNA MISSION, PONDA**' ಹೆಸರಿನಲ್ಲಿ ತೆಗೆದು, ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಂತಿ:

**Ramakrishna Mission, Ponda, Goa (Riverside Centre),** Parsol, P.O.: Khandepar Branch Office, Inside from Khursakade Bus Stop, After Chowgule Maruti Service, **PONDA, GOA - 403 406.** Mob: 09414042638

**ನೇರ ಬ್ಯಾಂಕ್ ಖಾತೆಗೆ ಹಣ ವರ್ಗಾಯಿಸಬಹುದು. ಅದಕ್ಕೆ ಅಗತ್ಯವಾದ ವಿವರಗಳು ಹೀಗಿವೆ:**

Account Name: **Ramakrishna Mission, Ponda**
Type of A/c: **Saving Account**

**All donations are exempt under section 80G of Income Tax Act.**
**Our Pan No: AAAAR1077P**

**Bank of India,** Panduranga Plaza, Tisk, Usgao, Ponda, Goa-403406.
Ph: 0832-2345651/52
**IFSC/RTGS Code: BKID0001037**
**MICR Code: 403013038**
**A/c No: 103710110005784**

**Punjab National Bank,** Ponda, Goa - 403401,
Ph: 0832-2317171
**IFSC /RTGS Code: PUNB0684700**
**MICR Code: 403024006**
**A/c No: 6847000100021760**



# ರಾಮಕೃಷ್ಣ ತಪೋವನ

(ರಾಮಕೃಷ್ಣ ಮಠ ಹಾಗೂ ರಾಮಕೃಷ್ಣ ಮಿಷನ್, ಬೇಲೂರು ಮಠ, ಪಶ್ಚಿಮ ಬಂಗಾಳ ಇದರ ಮಾರ್ಗದರ್ಶನದಲ್ಲಿ ನಡೆಯುವ **ಕರ್ನಾಟಕ ರಾಮಕೃಷ್ಣ-ವಿವೇಕಾನಂದ ಭಾವ ಪ್ರಚಾರ ಪರಿಷತ್** ಇದರ ಸದಸ್ಯತ್ವ ಹೊಂದಿದ ಸಂಸ್ಥೆ)

## ರಾಮಕೃಷ್ಣ ತಪೋವನ ಬಾಲಕಾಶ್ರಮ, ಪೊಳಲಿಯಲ್ಲಿ ಉಚಿತ ವಸತಿ ಸೌಲಭ್ಯ :

### ಅರ್ಜಿ ಆಹ್ವಾನ

ಆರ್ಥಿಕವಾಗಿ ಹಿಂದುಳಿದ ಮತ್ತು ನಾನಾ ಕಾರಣಗಳಿಂದ ವಿದ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದ ಗ್ರಾಮೀಣ ಪ್ರತಿಭಾವಂತ ಹುಡುಗರಿಗೆ ಶಿಕ್ಷಣಕ್ಕೆ ನೆರವಾಗುವ ಅನ್ವಯ **ರಾಮಕೃಷ್ಣ ತಪೋವನ ಬಾಲಕಾಶ್ರಮವು** ಅರ್ಜಿ ಆಹ್ವಾನಿಸಿದೆ.

ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಹಾಗೂ ನೆರೆಯ ಜಿಲ್ಲೆಗಳ, 7 ನೇ ತರಗತಿಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು 8ನೇ ತರಗತಿಗೆ ಸೇರಬಹುದು. ಉಚಿತ ಶಿಕ್ಷಣ, ಊಟ ಮತ್ತು ವಸತಿ ಒದಗಿಸಲಾಗುವುದು. ಜೊತೆಗೆ ಭಜನೆ, ಸಂಗೀತ, ಯಕ್ಷಗಾನ, ತೋಟಗಾರಿಕೆ, ಕಂಪ್ಯೂಟರ್, ಯೋಗ, ಶ್ರಮಸೇವೆ, ಭರತನಾಟ್ಯ, ಕರಾಟೆ ಇತ್ಯಾದಿ ತರಬೇತಿ ನೀಡಲಾಗುತ್ತದೆ. ಸುಂದರ ಹಳ್ಳಿಯ ಪರಿಸರದಲ್ಲಿ ಈ ಬಾಲಕಾಶ್ರಮವಿದ್ದು, ಆಸಕ್ತಿಯಿದ್ದ ಹುಡುಗರು 7ನೇ ತರಗತಿಯ ಪರೀಕ್ಷೆ ಮುಗಿದ ಕೂಡಲೇ ವೈಯಕ್ತಿಕ ವಿವರಗಳೊಂದಿಗೆ ದೂರವಾಣಿ ಇಲ್ಲವೆ ಅಂಚೆಯ ಮೂಲಕ ಸಂಪರ್ಕಿಸಬಹುದು. ಬಾಲಕಾಶ್ರಮದ ಪರಿಚಯ-ಮಾಹಿತಿಗಾಗಿ ವಿದ್ಯಾರ್ಥಿಗಳು ಒಂದು ವಾರ ಬಾಲಕಾಶ್ರಮದಲ್ಲಿ ಉಳಿದುಕೊಳ್ಳಬೇಕಾಗುತ್ತದೆ. ಮಕ್ಕಳ ಮೇಲ್ವಿಚಾರಣೆಯನ್ನು ಸ್ವತಃ ಸ್ವಾಮೀಜಿಯವರೇ ವಹಿಸಿಕೊಳ್ಳುವರು.

ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಬೇಕಾದ ವಿಳಾಸ : **ರಾಮಕೃಷ್ಣ ತಪೋವನ, ಶ್ರೀರಾಜರಾಜೇಶ್ವರಿ ದೇವಸ್ಥಾನದ ಬಳಿ, ಕರಿಯಂಗಳ ಗ್ರಾಮ, ಪೊಳಲಿ ಅಂಚೆ, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ - 574219**

ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ : 9845165108, 0824-2016455, 2266655



# ಶ್ರೀರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ - 571216, ಕೊಡಗು ಜಿಲ್ಲೆ

Phone : 08274-249040, 249555; Email: srksevaponnampet@gmail.com

Website: www.rkmponnampet.org

## ವಸಂತ ವಿಹಾರ

**(ಬೇಸಿಗೆ ರಜದಲ್ಲಿ ಗಂಡುಮಕ್ಕಳಿಗಾಗಿ ಮೌಲ್ಯವರ್ಧನಾ ಕಾರ್ಯಾಗಾರ)**

**23.4.2017 ರಿಂದ 30.4.2017**

ಪ್ರಿಯ ಸ್ನೇಹಿತರೇ,

ಪೊನ್ನಂಪೇಟೆಯ ಆಶ್ರಮದ ಆವರಣದಲ್ಲಿ ಭಗವಾನ್ ಶ್ರೀರಾಮಕೃಷ್ಣರ ಭವ್ಯವಾದ ವಿಶ್ವಭಾವೈಕ್ಯ ಮಂದಿರವನ್ನು ನಿರ್ಮಿಸಲಾಗಿದೆ. ಈ ದೇವಾಲಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಹಲವಾರು ಸೇವಾಕಾರ್ಯಗಳನ್ನು ಆಶ್ರಮವು ನಡೆಸುತ್ತಿದೆ. 11 ರಿಂದ 15 ವರ್ಷ ವಯಸ್ಸಿನ ಶಾಲಾ ಮಕ್ಕಳಿಗಾಗಿ **'ವಸಂತ ವಿಹಾರ'** ಎಂಬ ಬೇಸಿಗೆ ಶಿಬಿರವನ್ನು **23.4.2017 ರಿಂದ 30.4.2017** ರ ವರೆಗೆ ನಡೆಸಲಿದ್ದೇವೆ. ಈ ಶಿಬಿರವು ಬೆಳಗಿನಿಂದ ಸಂಜೆಯವರೆಗೆ ಇರುತ್ತದೆ. ಪರಸ್ಥಳಗಳಿಂದ ಬರುವ ಮಕ್ಕಳಿಗೆ ಆಶ್ರಮದಲ್ಲಿ ಮತ್ತು ಹತ್ತಿರದ ಕೆಲವು ಆವಾಸಿ ಶಾಲೆಗಳಲ್ಲಿ ತಂಗುವ ವ್ಯವಸ್ಥೆಯನ್ನೂ ಮಾಡಲಿದ್ದೇವೆ. ಮಕ್ಕಳಿಗೆ ಯೋಗಾಸನ, ಪ್ರಾಣಾಯಾಮ, ಏಕಾಗ್ರತೆಯನ್ನು ಬೆಳೆಸಿಕೊಳ್ಳುವ ವಿಧಾನ, ವ್ಯಕ್ತಿತ್ವ ವಿಕಾಸ, ಮೌಲ್ಯಶಿಕ್ಷಣ, ಪ್ರಾರ್ಥನೆ ಮುಂತಾದವುಗಳನ್ನು ಹೇಳಿಕೊಡಲಾಗುವುದು. ನಿಮ್ಮ ಮಕ್ಕಳನ್ನು ಈ ಕಾರ್ಯಕ್ರಮಕ್ಕೆ ಕಳುಹಿಸಿಕೊಡುವುದರಿಂದ ನಮ್ಮ ಸನಾತನ ಧರ್ಮದ ಮೌಲ್ಯಗಳ ಬಗ್ಗೆ ಅವರಿಗೆ ಅರಿವು ಮೂಡುತ್ತದೆ. ಸ್ವಾಮಿ ವಿವೇಕಾನಂದರ ಆಶಯದಂತೆ ಅವರನ್ನು ಯೋಗ್ಯ, ಉಪಯುಕ್ತ ಪ್ರಜೆಗಳನ್ನಾಗಿ ರೂಪಿಸುವುದೇ ನಮ್ಮ ಉದ್ದೇಶ.

**ಶಿಬಿರ ಶುಲ್ಕ :** ವಸತಿ ರಹಿತ : ರೂ.350/- ; ವಸತಿ ಸಹಿತ : ರೂ.700/- ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ : **15.4.2017**

**1) 11 ರಿಂದ 15 ವರ್ಷ ವಯಸ್ಸಿನ ಗಂಡುಮಕ್ಕಳಿಗೆ ಮಾತ್ರ. 2) ಖಾಲಿ ಕಾಗದದಲ್ಲಿ ವಿದ್ಯಾರ್ಥಿಯ ಹೆಸರು, ವಯಸ್ಸು, ತರಗತಿ, ತಂದೆತಾಯಿಗಳ ಹೆಸರು, ವಿಳಾಸ, ಲ್ಯಾಂಡ್ ಫೋನ್ ಮತ್ತು ಮೊಬೈಲ್ ಫೋನ್ ನಂಬರುಗಳನ್ನು ಬರೆದು, ಡಿ.ಡಿ. ಮೂಲಕ ಹಣವನ್ನು ಆಶ್ರಮಕ್ಕೆ ಕಳುಹಿಸಿರಿ.**

RTGSಗಾಗಿ ಬ್ಯಾಂಕ್ ವಿವರಗಳು: Sri Ramakrishna Sharadashrama, Ponnampet. SB. A/c.no.003200101013023. IFSC Code : CORP0000032 (ಹಾಗೂ, ಪತ್ರ ಅಥವಾ ಇಮೇಲ್ ಮೂಲಕ ವಿವರಗಳನ್ನು ತಿಳಿಸಿರಿ.)

ಪ್ರೀತಿ ಮತ್ತು ಶುಭಾಶಯಗಳೊಂದಿಗೆ,

ಭಗವತ್ಸೇವೆಯಲ್ಲಿ ತಮ್ಮವ

ಸ್ವಾಮಿ ಬೋಧಸ್ವರೂಪಾನಂದ

ಅಧ್ಯಕ್ಷರು



ಸಂಪಾದಕೀಯ

# ನಾದಾಂತರಂಗ

ಭಾರತದಲ್ಲಿ ಜೀವನದ ಪ್ರತಿಯೊಂದು ಅಂಗವೂ ಧಾರ್ಮಿಕ ಆಚರಣೆಯೊಂದಿಗೆ ಸಂಬಂಧಪಟ್ಟಿರುತ್ತದೆ ಎಂಬ ಮಾತೊಂದಿದೆ. ಇಲ್ಲಿ ಹುಟ್ಟಿನಿಂದ ಸಾವಿನ ತನಕ, ಬೆಳಗಿನಿಂದ ರಾತ್ರಿಯ ತನಕ, ವರ್ಷದ ಆರಂಭದಿಂದ ಕೊನೆಯ ತನಕ—ಪ್ರತಿಯೊಂದೂ ಧಾರ್ಮಿಕ ಚಟುವಟಿಕೆಗಳಿಂದ ನಿಬಿಡವಾಗಿರುತ್ತದೆ. ಇದಕ್ಕೆ ಅನುಗುಣವಾಗಿ ನಮ್ಮ ವೃತ್ತಿ, ಕೌಟುಂಬಿಕ ಜೀವನ, ಸಾಮಾಜಿಕ ಕ್ರಿಯೆಗಳು, ಕಲೆ-ಸಾಹಿತ್ಯ-ಸಂಗೀತಗಳು ಕೂಡ ಧರ್ಮ, ಅಧ್ಯಾತ್ಮವನ್ನು ಕೇಂದ್ರವಾಗಿಟ್ಟುಕೊಂಡೇ ನಡೆಯುತ್ತವೆ. ಎಲ್ಲ ಕ್ರಿಯೆಗಳ ಗಮ್ಯಸ್ಥಾನ ಅದೇ—ಭಗವಂತನ ಆನಂದಮಯ ನೆಲೆಯನ್ನು ತಲುಪುವುದು. ಈ ಹಿನ್ನೆಲೆಯಲ್ಲಿ ಕಲೆಗಳಲ್ಲೆಲ್ಲ 'ದಿವ್ಯಕಲೆ'ಯೆಂದೇ ಕರೆಯಲ್ಪಡುವ ಸಂಗೀತವು ನಮ್ಮಲ್ಲಿ ಆಧ್ಯಾತ್ಮಿಕತೆಯೊಂದಿಗೆ ಹೇಗೆ ನಿಕಟವಾಗಿ ಬೆಸೆದುಕೊಂಡಿದೆ ಎಂಬುದನ್ನು ಗಮನಿಸಬೇಕು.

### ತಾತ್ತ್ವಿಕ ಮೂಲ

ನಮ್ಮಲ್ಲಿ ಪ್ರತಿಯೊಂದು ಜ್ಞಾನವೂ ತತ್ತ್ವದಲ್ಲೇ ಆರಂಭವಾಗುತ್ತದೆ, ಎಲ್ಲ ಬೆಳವಣಿಗೆ, ಸಮೃದ್ಧಿಗಳನ್ನು ಪಡೆದುಕೊಂಡ ಬಳಿಕ ತತ್ತ್ವದಲ್ಲೇ ಒಂದಾಗುತ್ತದೆ. ಯಾವುದೇ ಶಾಸ್ತ್ರ, ಕಲೆ, ವಿದ್ಯೆಗಳಿರಲಿ, ಈ ವಿಶೇಷತೆಗೆ ಹೊರತಲ್ಲ. ಭಾರತೀಯ ಸಂಗೀತದ ಉಗಮ ಅಥವಾ ಮೂಲವನ್ನು ಹುಡುಕಹೊರಟವರೂ ಇದು ಓಂಕಾರದಿಂದಲೇ ಹುಟ್ಟಿತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ವೇದಗಳಿಂದ, ಅದರಲ್ಲೂ ಸಾಮವೇದದಿಂದ ವಿವಿಧ ಸ್ವರಗಳ ಕಲ್ಪನೆ, ರಾಗವಾಗಿ ಹಾಡುವ ಕ್ರಮ ವಿಕಸನ ಹೊಂದಿತು ಎಂದು ಐತಿಹಾಸಿಕವಾಗಿ ಹೇಳಲಾಗುತ್ತದೆ, ನಿಜ. ಆದರೆ ವೇದಗಳ ವ್ಯಕ್ತರೂಪದ ರಚನೆಗಳ ಮೂಲದಲ್ಲಿ ಅಲೌಕಿಕ ಅನುಭವವಿದೆ; ಅದರ ಆಳದಲ್ಲಿ ಓಂಕಾರದ ಸ್ಪಂದನವಿದೆ. ವೇದಗಳ ಪ್ರಮುಖ ಭಾಗವಾಗಿರುವ ಉಪನಿಷತ್ತುಗಳಲ್ಲಿ ಓಂಕಾರವನ್ನು ಕುರಿತು ಹಲವು ಬಗೆಯ ವಿವರಣೆಗಳು ಬರುತ್ತವೆ. ಓಂಕಾರವೆಂಬುದು ಅಕ್ಷರವೂ ಹೌದು, ನಾದವೂ ಹೌದು, ತತ್ತ್ವವೂ ಹೌದು; ಸಾಧಕನು ಪರಬ್ರಹ್ಮವನ್ನು ಹೊಂದಲು ಅನುಸರಿಸಬೇಕಾದ ಸಾಧನೆಯ ಕ್ರಮವೂ ಹೌದು. ಸಂಗೀತವು ಆಧ್ಯಾತ್ಮಿಕ ಸಾಧನೆಯೂ ಆಗಿದೆ ಎಂಬ ಭಾವನೆಗೆ ಮೂಲ ಇಲ್ಲಿದೆ. 'ನಿರಂತರ ನಾದ' ಎಂಬ ಅರ್ಥದಲ್ಲೇ ಓಂಕಾರವನ್ನು ಕಂಡುಕೊಳ್ಳುವ ಇನ್ನೊಂದು ಬಗೆ ಮುಂದೆ ವಿಕಾಸಗೊಂಡದ್ದನ್ನು ಕಾಣುತ್ತೇವೆ. ಅನಾಹತ ನಾದ, ತಂತ್ರಶಾಸ್ತ್ರದ 'ನಾದ-ಬಿಂದು-ಕಲೆ' ಎಂಬ ತತ್ತ್ವ ಆಧ್ಯಾತ್ಮಿಕ ಅನುಭೂತಿಯ ಒಂದು ಉನ್ನತ ಹಂತವೆಂಬಂತೆ ಹಲವು ಮಂದಿ ಸಾಧಕರಿಂದ ವಿವರಿಸಲ್ಪಟ್ಟಿದೆ. ಭಾರತೀಯ ಸಂಗೀತದ ಶ್ರುತಿಬದ್ಧ ಸ್ವರವಿನ್ಯಾಸದ ಕಲ್ಪನೆಗೂ, ಈ 'ನಿರಂತರ ನಾದ'ದ ತಾತ್ತ್ವಿಕ ಭಾವನೆಗೂ ನಿಕಟವಾದ ಸಂಬಂಧವಿದೆ. ತತ್ತ್ವವೇ ಜೀವನ; ಲೌಕಿಕವು ಅಲೌಕಿಕದತ್ತ ಸಾಗುವುದೇ ಜೀವನ—ಎಂಬ ಭಾವನೆ ನಮ್ಮ ಪರಂಪರೆಯಲ್ಲಿ ಬೆಳೆದು ಬಂದಿರುವುದೇ ಇಂತಹ ವಿಕಾಸಕ್ಕೆ ಕಾರಣವಾಗಿದೆ.

### ನಾದಮಾಧ್ಯಮ

ವೇದಕಾಲದಲ್ಲಿ ಗಾನಮಾಧುರ್ಯದ ಕಡೆಗೆ ಒಲವು ಬೆಳೆದು ಬಂದಿರುವುದಕ್ಕೆ ಸ್ಪಷ್ಟವಾದ ಉಲ್ಲೇಖಗಳಿವೆ. ವೇದಗಳನ್ನು ಸಂಹಿತೆಯಾಗಿ ಹಾಡುವುದು, ಮೂರು ಅಥವಾ ನಾಲ್ಕು ಸ್ವರಗಳ ಮೂಲಕ ಮಂತ್ರೋಚ್ಚಾರಣೆ ಮಾಡುವುದು ಅತ್ಯಂತ ಪ್ರಾಚೀನ ಕಾಲದಿಂದ ಇಂದಿನವರೆಗೂ ಮುಂದುವರಿದುಕೊಂಡು ಬಂದ ಪದ್ಧತಿ. ಹೀಗೆ ಸಂಹಿತೆಗಳ ಪಠಣದಿಂದ ದೇವತೆಗಳು ತೃಪ್ತರಾಗುತ್ತಾರೆಂದೂ, ಯಜ್ಞಮಾಡಿದವರಿಗೆ ಅವರು ವಿಶೇಷ ಅನುಗ್ರಹ ಮಾಡುತ್ತಾರೆಂದೂ ಅತಿ ಪ್ರಾಚೀನವಾದ ಋಗ್ವೇದದಲ್ಲೇ ಉಕ್ತವಾಗಿದೆ. ಮುಂದೆ ಸಾಮವೇದದಲ್ಲಿ ಇನ್ನಷ್ಟು ಸ್ವರಗಳೊಂದಿಗೆ ವೇದಸಂಹಿತೆಗಳನ್ನು ಹಾಡುವ ಕ್ರಮ ಬೆಳೆದುಬಂತು; ಈ ಸಾಮಗಾನದಿಂದಲೇ ಮುಂದೆ ಸಂಗೀತದ ಸಪ್ತಸ್ವರಗಳು ವಿಕಸನ ಹೊಂದಿ, ಪ್ರತ್ಯೇಕವಾಗಿ ಶಾಸ್ತ್ರೀಯ ರಾಗಗಳು ಹುಟ್ಟಿದವು—ಎಂದು ಸಂಗೀತಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಒಂದು ಕಲೆಯ ಉಗಮ ಹಾಗೂ ವಿಕಾಸ ಆಧ್ಯಾತ್ಮಿಕತೆಯೊಂದಿಗೆ ಎಷ್ಟು ಹಾಸುಹೊಕ್ಕಾಗಿ ನಮ್ಮಲ್ಲಿ ಕಂಡುಬರುತ್ತದೆ ಎಂಬುದನ್ನು ಇದು ತೋರಿಸಿಕೊಡುತ್ತದೆ. ಎಲ್ಲ ಕಲೆಗಳ ಮೂಲವೂ ಜಾನಪದ ಅಥವಾ ಮಾನವನ

ಆದಿಮ ಸಂಸ್ಕೃತಿ ಎಂಬ ಸಮಾಜಶಾಸ್ತ್ರದ ತತ್ತ್ವಗಳಿಗೆ ಅಪವಾದವೆಂಬಂತಿದೆ, ಭಾರತೀಯ ಶಾಸ್ತ್ರೀಯ ಕಲೆಗಳ ವಿಕಾಸ. ಬಹುಶಃ ಶಾಸ್ತ್ರೀಯ ಹಾಗೂ ಜಾನಪದೀಯ ಅಂಶಗಳ ಕೊಡು-ಕೊಳ್ಳುವಿಕೆಯ ಪ್ರಕ್ರಿಯೆಯನ್ನು ಸ್ಪಷ್ಟವಾಗಿ ಗುರುತಿಸಲಾಗದಷ್ಟು ಪ್ರಾಚೀನ ಕಾಲದಲ್ಲಿ ನಮ್ಮ ಶಾಸ್ತ್ರೀಯ ಕಲೆಗಳು ರೂಪುಗೊಂಡಿದ್ದಿರಬೇಕು. ಏನಿದ್ದರೂ ನಾದಕಲೆಯನ್ನು ಒಂದು ಶ್ರೇಷ್ಠವಾದ, ಪವಿತ್ರವಾದ ಹಾಗೂ ಆಧ್ಯಾತ್ಮಿಕ ನೆಲೆಗೆ ಏರಿಸಿದ್ದು, ಹಾಗೂ ಮುಂದೆ ಅದಕ್ಕೆ ಶಾಸ್ತ್ರೀಯ ಚೌಕಟ್ಟನ್ನು ಹಾಕಿಕೊಟ್ಟದ್ದು ಮೂಲತಃ ವೈದಿಕ ಸಂಸ್ಕೃತಿಯ ಕೊಡುಗೆ ಎಂಬುದರಲ್ಲಿ ಯಾವುದೇ ಭಿನ್ನಾಭಿಪ್ರಾಯಗಳಿಲ್ಲ.

### ಒಬ್ಬ ಅಸಾಮಾನ್ಯ ಗಾರುಡಿಗ

ಸಂಗೀತವನ್ನು ಕುರಿತು ಆಲೋಚಿಸುವಾಗ ಶ್ರೀಕೃಷ್ಣನನ್ನು ಮರೆಯುವುದುಂಟೆ? ಐದಾರು ಸಾವಿರ ವರ್ಷಗಳ ಹಿಂದೆ, ಅಥವಾ ಇನ್ನೂ ಪ್ರಾಚೀನ ಕಾಲದಲ್ಲಿ ಒಬ್ಬ ಗಾರುಡಿಗ ಹುಟ್ಟಿ ಬಂದ. ಅವನು ಮಾಡಿದ ಮೋಡಿಗೆ ಒಳಗಾಗದವರಾರು? ವಿಶೇಷವಾಗಿ ವೃಂದಾವನದ ಗೊಲ್ಲರ ಹಳ್ಳಿಗಳಲ್ಲೆಲ್ಲ ಅವನು ಮನೆಮಾತಾದ. ಅವನಂತೆಯೇ ಅವನ ಕೊಳಲಿನ ಧ್ವನಿಯೂ ಮನೆಮಾತಾಯಿತು. ಮಕ್ಕಳು, ಮಹಿಳೆಯರು, ಎಳೆಯ ಬಾಲೆಯರು, ಗೊಲ್ಲ ಹುಡುಗರು ಮಾತ್ರವಲ್ಲ, ಗೋವುಗಳು, ಹಕ್ಕಿಗಳೂ ಕೂಡ ಅವನ ಕೊಳಲಿನ ಧ್ವನಿಗೆ ಮೈಮರೆತು, ಮರಗಟ್ಟಿ ನಿಂತವಂತೆ! ಆ ಬಗೆಯ ಮಾಧುರ್ಯ, ತನ್ಮಯತೆ, ಉನ್ಮತ್ತತೆ, ಬೇರೆಲ್ಲವನ್ನೂ ಬಿಟ್ಟು ಓಡಿಬಂದು ಆ ಕೊಳಲಿನ ವಾದನವನ್ನೇ ಆಲಿಸುವ ಅತೀವ ಕಾತರತೆ ಇನ್ನೆಲ್ಲಿ ಕಾಣಸಿಗುವುದು? ದಿವ್ಯತೆಯ ಭಾವಗಳನ್ನೆಲ್ಲ ಕೃಷ್ಣ ಕೊಳಲಿನ ಮೂಲಕ ಹರಿಯಬಿಟ್ಟ. ಅಲೌಕಿಕ ನೆಲೆಯ ತೀವ್ರತೆಯು ನಾದದ ಮೂಲಕ ಹುಚ್ಚುಹೊಳೆಯಾಗಿ ಹರಿಯಿತು. ಕೇವಲ ನಂದಗೋಕುಲ, ಬೃಂದಾವನ, ಮಥುರೆಗಳನ್ನಷ್ಟೇ ಅಲ್ಲ; ಜಗತ್ತಿನೆಲ್ಲೆಡೆ ಆ ನಾದ ಪ್ರವಹಿಸಿತು. ಸಾವಿರಾರು ವರ್ಷಗಳ ಹಿಂದೆ ಹರಿದಾಡಿದ ಆ ಪ್ರವಾಹ ಇಂದಿಗೂ ಹರಿಯುತ್ತಿದೆ; ಭಕ್ತರ, ಸಾಧಕರ ಮನಸ್ಸು-ಹೃದಯಗಳನ್ನು ಹೊಕ್ಕು ಉನ್ಮಾದದ ಅಲೆಗಳನ್ನೇ ಚಿಮ್ಮಿಸುತ್ತಿದೆ.

### ಭಕ್ತಿ ಹಾಗೂ ಸಂಗೀತ

ಆಧ್ಯಾತ್ಮಿಕ ಪರಂಪರೆಯಲ್ಲಿ ಭಕ್ತಿಪಂಥಗಳ ಉದಯವಾದಾಗಲೇ, ಅವರು ತಮ್ಮ ಸಾಧನೆಯ ಅಂಗವಾಗಿ ಸಂಗೀತ ಮಾಧ್ಯಮವನ್ನು ಬಳಸಿಕೊಂಡಿದ್ದನ್ನು ಕಾಣುತ್ತೇವೆ. ಆಳ್ವಾರ್‌ಗಳು, ನಾಯನ್ಮಾರರು, ಶರಣರು ಹಾಗೂ ದಾಸರು, ಮಹಾರಾಷ್ಟ್ರದ ಭಕ್ತಸಂತರು, ಮುಂದೆ ಉತ್ತರ ಭಾರತದಲ್ಲೆಲ್ಲ ವ್ಯಾಪಕಗೊಂಡ ತುಳಸೀದಾಸ, ಕಬೀರದಾಸ, ಮೀರಾಬಾಯಿ ಮೊದಲಾದ ಸಂತರು ತಮ್ಮ ಭಕ್ತಿಯ ಭಾವನೆಗಳನ್ನು ಹಾಡಿನ ಮೂಲಕ, ಕವಿತೆಗಳ ಮೂಲಕ ವ್ಯಕ್ತಗೊಳಿಸಿದರು. ಈ ಭಕ್ತಿಕಾವ್ಯ ಪ್ರಧಾನವಾಗಿ ಹಾಡುಗಳಾಗಿದ್ದವು; ತಮ್ಮ ಇಷ್ಟದೇವತೆಯ ಮುಂದೆ ಅವುಗಳನ್ನು ಹಾಡುತ್ತ, ತಮ್ಮ ಹೃದಯನಿವೇದನೆ ಮಾಡಿಕೊಳ್ಳುತ್ತ ಅವರು ಭಗವಂತನ ದರ್ಶನವನ್ನು ಪಡೆದರು. ಅವರ ಪರಂಪರೆಯಲ್ಲಿ ಬಂದ ಶಿಷ್ಯರು ಹಾಗೂ ಅನುಯಾಯಿಗಳು ಈ ಹಾಡಿನ ಪರಂಪರೆಯನ್ನು ಮುಂದುವರೆಸಿದರು. ಹೀಗೆ ಸಂಗೀತವು ಭಕ್ತಿಕಾವ್ಯ, ಹಾಡುಗಳ ಮೂಲಕ ಜನಸಾಮಾನ್ಯರ ನಾಲಿಗೆಯಲ್ಲೂ ನಲಿದಾಡಿತು; ನಾದ ಮಧ್ಯಮವು ಮತ್ತೊಮ್ಮೆ ಜನರ ಆಧ್ಯಾತ್ಮಿಕ ಜೀವನವಾಯಿತು.

ಈ ನಡುವೆ ಬೆಳೆದು ಬಂದ ಪುರಾಣಗ್ರಂಥಗಳ ಪ್ರಭಾವವನ್ನು ನಾವು ನಿರ್ಲಕ್ಷಿಸುವಂತಿಲ್ಲ. ಭಕ್ತಿಪರಂಪರೆಯಲ್ಲಿ ಪುರಾಣಗಳು ಮಹತ್ವದ ಪಾತ್ರ ವಹಿಸಿವೆ. ಭಗವಂತನ ಲೀಲಾಕಥನ, ಭಕ್ತಿ ಪಾರಮ್ಯದ ಕಥೆಗಳಿಂದ ತುಂಬಿರುವ ಪುರಾಣಗಳು ಹಲವು ದೇವದೇವತೆಗಳ, ಸಂತಮಹಾತ್ಮರ, ಭಕ್ತರ ಒಂದು ದಿವ್ಯಲೋಕವನ್ನೇ ಸೃಷ್ಟಿಸುತ್ತವೆ. ಈ ಪುರಾಣಗಳಲ್ಲೇ ವಿದ್ಯೆಯ ಅಧಿದೇವತೆಯಾದ ಸರಸ್ವತಿ ನಾದದೇವತೆಯೂ ಆಗಿ ಮೂಡಿಬಂದಳು; ಆಕೆ ದಿವ್ಯವೀಣೆಯನ್ನು ಮೀಟುತ್ತ ಜಗತ್ತನ್ನೆಲ್ಲ ನಾದಸುಧೆಯಿಂದ ತುಂಬಿದಳು. ಅದೇ ರೀತಿ ದೇವರ್ಷಿ ನಾರದರು ಭಕ್ತಿಗೂ ಸಂಗೀತಕ್ಕೂ ಪ್ರಸಿದ್ಧರು; ಸದಾ ತಂಬೂರಿ ಮೀಟುತ್ತಲೇ ಭಕ್ತರ ನಡುವೆ ಓಡಾಡಿದರು. ಇಂಥ ಪುರಾಣಗಳನ್ನು ಆಧರಿಸಿಕೊಂಡೇ ಹಲವು ಮಂದಿ ಸಂತರು, ಭಕ್ತರು ಅನೇಕ ಹಾಡುಗಳನ್ನು ರಚಿಸಿದರು. ಅನೇಕ ವೇಳೆ ಅವರು ಹರಿಕಥೆ, ನಾಟಕ, ಯಕ್ಷಗಾನವೇ ಮೊದಲಾದ ಪ್ರಕಾರಗಳ ಮೂಲಕವೂ ಭಕ್ತಿ ಹಾಗೂ ದೈವಿಕತೆಯನ್ನು ಜನರತ್ತ ಕೊಂಡೊಯ್ದರು. ಈ ಎಲ್ಲ ಕಲಾಮಾಧ್ಯಮಗಳಲ್ಲೂ ಸಂಗೀತವು ಅನಿವಾರ್ಯವಾದ ಒಂದು ಅಂಗವಾಗಿತ್ತು ಎಂಬ ಅಂಶ ಗಮನಾರ್ಹ.

### ಮಹಾನ್ ಸಂಗೀತಗಾರರ ಕುಲುಮೆಯಲ್ಲಿ

ಚಾರಿತ್ರಿಕವಾಗಿ ಭಾರತೀಯ ಸಂಗೀತ ಗಮನಾರ್ಹ ಬದಲಾವಣೆಯನ್ನು ಕಂಡದ್ದು ಹದಿನೈದು-ಹದಿನಾರನೇ ಶತಮಾನದಲ್ಲಿ. ಮಹಮ್ಮದೀಯ ರಾಜವಂಶಗಳ ಆಳ್ವಿಕೆಯಿಂದಲೂ, ಪರ್ಷಿಯನ್ ಸಂಗೀತದ ಪ್ರಭಾವದಿಂದಲೂ ಉತ್ತರ ಭಾರತದಲ್ಲಿ ಸಂಗೀತದ ಹೊಸಗಾಳಿ ಬೀಸಿತು; ನಮ್ಮ ಸಂಗೀತದಲ್ಲಿ ಉತ್ತರಾದಿ-ದಕ್ಷಿಣಾದಿ ಎಂಬ ಪ್ರಭೇದ ಕಂಡುಬಂತು. ಇದರೊಂದಿಗೆ, ಸಂಗೀತ ಹಾಗೂ ಅಧ್ಯಾತ್ಮಗಳ ನಡುವಿನ ಸಂಬಂಧವೂ ಸಡಿಲವಾಗತೊಡಗಿತು. 'ಕಲೆಗಾಗಿ ಕಲೆ' ಎಂಬಂತೆ, ನಾದಸೌಖ್ಯಕ್ಕಾಗಿ ಮಾತ್ರ ಸಂಗೀತ ಎಂಬ ಅಭಿಪ್ರಾಯವೂ ವ್ಯಾಪಕವಾಗತೊಡಗಿತು. ರಾಜರ ಆಸ್ಥಾನ, ದರ್ಬಾರ್‌ಗಳಲ್ಲಿ ಸಂಗೀತದ ಪ್ರಾವೀಣ್ಯವನ್ನು ಮೆರೆಯುವ, ಸ್ವತಃ ರಾಜರೇ ಸಂಗೀತಗಾರರನ್ನು ಪೋಷಿಸುವ ಪ್ರವೃತ್ತಿ ಬೆಳೆದು ಬಂದಾಗ, ಸಹಜವಾಗಿ ಸಂಗೀತದಲ್ಲಿ ಆರಾಧನೆ, ಭಕ್ತಿ ಹಿನ್ನೆಲೆಗೆ ಸರಿಯಿತು; ಅಲ್ಲಿ ಕಲಾನೈಪುಣ್ಯ ಹಾಗೂ ನಾದಸೌಖ್ಯವೇ ಪ್ರಾಮುಖ್ಯತೆಯನ್ನು ಪಡೆಯಿತು. ಭಕ್ತಿರಸಕ್ಕೆ ಬದಲಾಗಿ ಶೃಂಗಾರ, ಕರುಣ ಮೊದಲಾದ ಬೇರೆ ರಸಗಳ ಅಭಿವ್ಯಕ್ತಿ ಕೂಡ ಮುಖ್ಯವೆನಿಸಿತು.

ಈ ಬದಲಾವಣೆ ಪ್ರಧಾನವಾಗಿ ಉತ್ತರಾದಿ ಅಥವಾ ಹಿಂದೂಸ್ತಾನೀ ಸಂಗೀತದಲ್ಲಿ ನಡೆದರೆ, ದಕ್ಷಿಣದಲ್ಲಿ ಪುರಂದರದಾಸ, ತ್ಯಾಗರಾಜರೇ ಮೊದಲಾದ ಸಂತರು ಸಂಗೀತದಲ್ಲಿ ಹೊಸ ಆವಿಷ್ಕಾರಗಳನ್ನು ಮಾಡಿದರು. ಇಲ್ಲಿ ಭಕ್ತಿಯೇ ಸಂಗೀತದ ಜೀವಾಳವೆಂಬ ಧ್ಯೇಯ ಇನ್ನಷ್ಟು ಪ್ರಮುಖವಾಗಿ ಮುಂದುವರಿಯಿತು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶಾಸ್ತ್ರೀಯ ಸಂಗೀತವು ಹಲವು ಬದಲಾವಣೆಗಳನ್ನು ಕಂಡುಕೊಂಡರೂ, ಅಲ್ಲಿ ಕೂಡ ಆಧ್ಯಾತ್ಮಿಕ ಭಾವ ಒಂದು ಪ್ರಮುಖ ಅಂಶವಾಗಿಯೇ ಉಳಿದಿದೆ. ಅದು ಭಕ್ತಿ, ಅಧ್ಯಾತ್ಮಗಳಿಗೆ ಮಾತ್ರ ಮೀಸಲಾಗದೆ, ಕೇವಲ ಕಲೆಯಾಗಿ ಮಾತ್ರ ಸಂಗೀತವನ್ನು ಆಸ್ವಾದಿಸುವ ಮನೋಧರ್ಮವಾಗಿಯೂ ಬೆಳೆದುಬಂದಿದೆ. ಇದರೊಂದಿಗೆ ಲಘುಸಂಗೀತ, ಭಾವಗೀತೆ, ರಂಗಗೀತೆ, ಚಿತ್ರಸಂಗೀತ, ಜಾನಪದ ಸಂಗೀತ – ಮೊದಲಾದ ವೈವಿಧ್ಯತೆಗಳೂ ಜೀವನದ ವಿವಿಧ ಅಂಗಗಳಿಗೆ, ವಿವಿಧ ಭಾವಗಳಿಗೆ ಅನುಗುಣವಾಗಿ ಬೆಳೆದು ಬಂದಿವೆ. ಇಡೀ ಸಂಗೀತವೇ ಆಧ್ಯಾತ್ಮಿಕವಾದುದು ಎಂಬ ಪರಿಸ್ಥಿತಿ ಬದಲಾಗಿ, ಆಧ್ಯಾತ್ಮಿಕತೆ ಸಂಗೀತದ ಒಂದು ಮುಖ್ಯ ಭಾವ ಎಂದು ಮಾತ್ರ ಸೀಮಿತಗೊಂಡಿದೆ. ಆಧ್ಯಾತ್ಮಿಕ ಜೀವನ ನಡೆಸುವವರಿಗೆ ಅದು ತಮ್ಮ ಆರಾಧನೆಯ ಒಂದು ಪ್ರಧಾನ ಅಂಗವಾಗಿರುವುದು ಮಾತ್ರ ವಾಸ್ತವ. ಈ ದೃಷ್ಟಿಯಲ್ಲಿ ಇಂದಿಗೂ ಭಕ್ತಿ, ಆರಾಧನೆ, ಪೂಜೆ ಹಾಗೂ ಆಧ್ಯಾತ್ಮಿಕ ಜೀವನದಲ್ಲಿ ಸಂಗೀತ ಅಥವಾ ಹಾಡು ಒಂದು ಪ್ರಮುಖ ಮಾಧ್ಯಮವಾಗಿಯೇ ಮುಂದುವರಿದಿದೆ.

### ಶ್ರೀರಾಮಕೃಷ್ಣರ ಪರಂಪರೆ

ಹತ್ತೊಂಬತ್ತನೇ ಶತಮಾನದಲ್ಲಿ ಭಾರತದ ನವೋತ್ಥಾನವುಂಟಾದುದು, ಇಡೀ ದೇಶದ ಇತಿಹಾಸವನ್ನೇ ಬದಲಾಯಿಸಿತು. ಎಲ್ಲಕ್ಕಿಂತ ಮುಖ್ಯವಾಗಿ, ಭಾರತದ ಆಧ್ಯಾತ್ಮಿಕ ಮುಖವನ್ನೇ ಪ್ರಜ್ವಲಗೊಳಿಸುವಂತಹ ಆಧ್ಯಾತ್ಮಿಕ ಮಹಾವ್ಯಕ್ತಿಗಳ ಉದಯ ಈ ದೇಶದಲ್ಲಾಯಿತು. ಬಂಗಾಳದಲ್ಲಿ ಜನಿಸಿ, ಇಡೀ ಜಗತ್ತಿಗೇ ತ್ಯಾಗ ಹಾಗೂ ಸಮನ್ವಯದ ಆದರ್ಶವನ್ನು ಸಾರಿದ ಶ್ರೀರಾಮಕೃಷ್ಣ ಪರಮಹಂಸರ ಉದಯವು ಭಾರತದ ಸಾಂಸ್ಕೃತಿಕ ಇತಿಹಾಸದಲ್ಲೂ ಒಂದು ಮಹತ್ವದ ತಿರುವಿಗೆ ಕಾರಣವಾಯಿತು. ದೈವೀ ಉನ್ಮಾದದ ಪಾರಮ್ಯವನ್ನು ಕಂಡಿದ್ದ ಶ್ರೀರಾಮಕೃಷ್ಣರು, ಅದನ್ನು ವ್ಯಕ್ತಪಡಿಸುತ್ತಿದ್ದುದು ರಾಮಪ್ರಸಾದ, ಕಮಲಾಕಾಂತ ಮೊದಲಾದ ಸಂತ–ಕವಿಗಳ ಅನುಭಾವೀ ಹಾಡುಗಳನ್ನು ಹಾಡುವ ಮೂಲಕ. ಬಾಲ್ಯದಿಂದಲೂ ಭಕ್ತಿಗೀತೆಗಳನ್ನು ಹಾಡಿ, ಹಳ್ಳಿಯ ಜನರ ಹೃದಯದಲ್ಲಿ ಭಕ್ತಿಯ ಭಾವವನ್ನು ಉಕ್ಕಿಸುವ ಕಲೆ ಶ್ರೀರಾಮಕೃಷ್ಣರಿಗೆ ಕರಗತವಾಗಿತ್ತು. ಅವರು ಭಾವಪೂರ್ಣವಾಗಿ ಹಾಡುತ್ತ ಅದರಲ್ಲೇ ಮಗ್ನರಾಗಿಬಿಡುತ್ತಿದ್ದರು; ನಡುನಡುವೆ ಭಾವ ಸಮಾಧಿಯನ್ನೂ ಅನುಭವಿಸುತ್ತಿದ್ದರು. ಅವರ ಸುತ್ತ ನೆರೆದವರೆಲ್ಲ ಅವರ ಹಾಡಿನ ಮಧುರತೆಗೂ, ಅದರಿಂದ ಹೊರ ಹೊಮ್ಮುತ್ತಿದ್ದ ಆಧ್ಯಾತ್ಮಿಕ ತರಂಗಗಳಿಗೂ ಮರುಳಾಗಿ, ಕಲ್ಲಿನಂತೆ ನಿಶ್ಚೇಷ್ಟಿತರಾಗಿ ಕುಳಿತುಬಿಡುತ್ತಿದ್ದರು. ಅವರ ಹಾಡನ್ನು ಕುರಿತು ಶ್ರೀಮಾತೆ ಶಾರದಾದೇವಿಯವರು ಹೇಳುತ್ತಾರೆ: ''ಠಾಕೂರರು (ಶ್ರೀರಾಮಕೃಷ್ಣರು) ಹಾಡುತ್ತಿದ್ದಾಗ ನಾನು ನಹಬತ್‌ನ ಬಿದಿರು ತಡಿಕೆಯ ಹಿಂದೆ ನಿಂತುಕೊಂಡೇ ಗಂಟೆಗಟ್ಟಳೆ ಕೇಳುತ್ತಿದ್ದೆ. ಹಾಡು ಮುಗಿದಾಗ ಎರಡೂ ಕೈಜೋಡಿಸಿ ಅಲ್ಲಿಂದಲೇ ನಮಸ್ಕರಿಸುತ್ತಿದ್ದೆ. ಓ! ಅದೆಂಥ ಆನಂದದ ದಿನಗಳು!'' ಒಂದು ಸಲ ಕಾಶಿಗೆ ಯಾತ್ರೆ ಹೋಗಿದ್ದ ಶ್ರೀರಾಮಕೃಷ್ಣರಿಗೆ ವೀಣಾವಾದನವನ್ನು ಕೇಳಬೇಕೆಂದು ತೀವ್ರ ಹಂಬಲವುಂಟಾಯಿತಂತೆ. ಭಾಗ್ಯವಶಾತ್ ಮದನಪುರದಲ್ಲಿ ಮಹೇಶಚಂದ್ರ ಸರ್ಕಾರ್ ಎಂಬ ಒಬ್ಬ ವೀಣಾವಿದ್ವಾಂಸನಿದ್ದ. ನೇರ ಅವನಲ್ಲಿಗೆ ಹೋದ ಶ್ರೀರಾಮಕೃಷ್ಣರು, ವೀಣೆ ನುಡಿಸುವಂತೆ ಅವನನ್ನು ಕೇಳಿಕೊಂಡರು. ಅವನ ವೀಣಾವಾದನವನ್ನು ಆಲಿಸಿದ ಶ್ರೀರಾಮಕೃಷ್ಣರು ಸಮಾಧಿಯ ಅವಸ್ಥೆಗೇರಿದರು; ಆದರೆ ಅವರು ಜಗನ್ಮಾತೆಯನ್ನು ಪ್ರಾರ್ಥಿಸುತ್ತ, ''ತಾಯೆ, ನಾನು ಸಂಗೀತ ಕೇಳಬೇಕೆಂದಿರುವೆ, ದಯವಿಟ್ಟು ನನ್ನನ್ನು ಸಮಾಧಿಯ ನೆಲೆಗೆ ಏರಿಸಬೇಡ'' ಎಂದು ಕೇಳಿಕೊಂಡರಂತೆ! ಅನಂತರ ಅವರು ಮೂರುಗಂಟೆಗಳ ಕಾಲ ಅವನ ವೀಣಾವಾದನವನ್ನು ಆಲಿಸಿದರು; ಜೊತೆಗೆ ತಾವೂ ಸ್ವರ ಸೇರಿಸಿ ಹಾಡಿದರು.

ಶ್ರೀರಾಮಕೃಷ್ಣರ ಶಿಷ್ಯರಾದ ಸ್ವಾಮಿ ವಿವೇಕಾನಂದರಿಗೂ ಸಂಗೀತವಿದ್ಯೆ ದೈವದತ್ತವಾಗಿ ಒಲಿದು ಬಂದಿತ್ತು. ಅವರ ಹಾಡನ್ನು ಕೇಳಿ ಶ್ರೀರಾಮಕೃಷ್ಣರು ಭಾವಪರವಶರಾಗಿ ಸಮಾಧಿಯ ನೆಲೆಗೇರಿ ಬಿಡುತ್ತಿದ್ದರು. ಶ್ರೀರಾಮಕೃಷ್ಣ–ವಿವೇಕಾನಂದರ ಜೀವನ, ಆಧ್ಯಾತ್ಮಿಕ ಸಾಧನೆ, ಭಕ್ತಿ–ಭಾವಗಳಲ್ಲೆಲ್ಲ ಸಂಗೀತ ಆಳವಾಗಿ ಬೆರೆತುಕೊಂಡಿದೆ. ಅದಕ್ಕನುಗುಣವಾಗಿ ಶ್ರೀರಾಮಕೃಷ್ಣರ ಪರಂಪರೆಯಲ್ಲಿ ಪ್ರಾರ್ಥನೆ, ಪೂಜೆ, ಆರಾಧನೆಯ ಅಂಗವಾಗಿ ಭಜನೆ, ಕಾಳೀಕೀರ್ತನೆ, ನಾಮಾವಳಿಗಳನ್ನು ಹಾಡುವ ಪದ್ಧತಿ ಇಂದಿಗೂ ಮುಂದುವರಿದಿದೆ. ಸಂಗೀತಸಾಧನೆ, ನಾದಸೌಖ್ಯ, ಕಲಾಪ್ರೌಢಿಮೆಗಳಿಗಿಂತ ಸಂಗೀತವು ಭಗವಂತನ ಆರಾಧನೆಯ ಒಂದು ಮಾಧ್ಯಮವಾಗಿ ಅತ್ಯುತ್ತಮವಾದ ಒಂದು ಕಲೆಯಾಗಿದೆ ಎಂದು ಈ ಪರಂಪರೆ ದೃಢವಾಗಿ ನಂಬಿದೆ.

ಭಾರತೀಯ ಸಂಗೀತದ ಜೀವಾಳವೇ ಆಧ್ಯಾತ್ಮಿಕತೆ. ವೇದಗಳಿಂದ ಹುಟ್ಟಿ ಬಂದ ಈ ನಾದಗಂಗೆ ಹಲವು ಉಪನದಿಗಳನ್ನೂ ತನ್ನೊಂದಿಗೆ ಸೇರಿಸಿಕೊಂಡು ಹರಿಯುತ್ತಿದೆ. ಶಾಸ್ತ್ರೀಯ, ಜಾನಪದ, ಲಘುಸಂಗೀತ, ಆಧುನಿಕ — ಹೀಗೆ ಹಲವು ಬಗೆಯಲ್ಲಿ ಸಂಗೀತ ಜೀವನದ ವಿವಿಧ ಮಜಲುಗಳನ್ನು ತೊಯ್ಯಿಸುತ್ತದೆ; ಜೀವನದ ನೋವುನಲಿವು, ಏಳುಬೀಳುಗಳಲ್ಲಿ ಒಂದಾಗಿ ಹೊಸ ಹೊಸ ರೂಪಗಳನ್ನು ಪಡೆಯುತ್ತಿದೆ. ಆದರೆ ಎಲ್ಲ ವೈವಿಧ್ಯತೆಗಳ ಹಿಂದಿರುವ ಏಕನಾದವನ್ನು ಅರಿತು ಹಾಡಿದಾಗಲೇ ಅದು 'ಭಾರತೀಯ ಸಂಗೀತ'ವೆನಿಸುವುದು. ಆಧ್ಯಾತ್ಮಿಕತೆಯೇ ಈ ಏಕನಾದ; ಎಲ್ಲ ಸ್ವರಗಳೂ ಒಂದಾಗುವ, ಎಲ್ಲ ಲಯ–ತಾನಗಳೂ ಮೇಳೈಸುವ ನಿತ್ಯನಾದವೇ ಅದು.



# ದಾಸ್ಯ ಭಕ್ತಿ



✿ ಭಕ್ತನ ಭಾವ ಯಾವ ರೀತಿಯದು ಗೊತ್ತೆ? ಆತನ ಭಾವ : 'ಹೇ ಭಗವಂತ, ನೀನು ಪ್ರಭು, ನಾನು ನಿನ್ನ ದಾಸ. ನೀನು ತಾಯಿ, ನಾನು ನಿನ್ನ ಮಗು' ಎಂಬುದಾಗಿ. ಮತ್ತೆ: 'ನೀನು ನನ್ನ ತಾಯಿ, ತಂದೆ; ನೀನು ಪೂರ್ಣ, ನಾನು ಅಂಶ' ಎಂಬುದಾಗಿ. ಭಕ್ತ 'ನಾನೇ ಬ್ರಹ್ಮ' ಎಂಬುದಾಗಿ ಹೇಳಲು ಎಂದಿಗೂ ಇಚ್ಛೆ ಪಡುವುದಿಲ್ಲ.

✿ ಸೇವ್ಯ-ಸೇವಕ ಭಾವವೇ ಒಳ್ಳೆಯದು, 'ಅಹಂ' ಎಂಬುದು ಪೂರ್ಣವಾಗಿ ಹೋಗದೆ ಇರುವುದರಿಂದ ಆ ನೀಚಮುಂಡೇದು 'ದಾಸ ಅಹಂ' ಆಗಿ ಉಳಿದುಕೊಂಡಿರಲಿ.

✿ ಪ್ರಶ್ನೆ: ''ಒಳ್ಳೇದು, ಯಾರ 'ಅಹಂ' 'ದಾಸ ಅಹಂ' ಆಗಿರುವುದೋ ಅವರ ಕಾಮ ಕ್ರೋಧಾದಿಗಳ ಸಮಾಚಾರ ವೇನು?''

ಶ್ರೀರಾಮಕೃಷ್ಣರು: ''ಮನುಷ್ಯನಿಗೆ ನಿಜವಾಗಿ ಆ ಭಾವ ಬಂದಿರುವುದಾದರೆ, ಆತನಲ್ಲಿ ಕಾಮಕ್ರೋಧಾದಿಗಳ ಕೇವಲ ಸೋಗು ಉಳಿದುಕೊಳ್ಳುತ್ತದೆ. ಭಗವಂತನ ಸಾಕ್ಷಾತ್ಕಾರ ದೊರೆತ ನಂತರ ಆತನಲ್ಲಿ 'ದಾಸ ಅಹಂ' ಅಥವಾ 'ಭಕ್ತ ಅಹಂ' ಉಳಿದು ಕೊಂಡರೆ, ಆತ ಯಾರಿಗೂ ಕೆಡುಕನ್ನು ತರಲಾರ. ಕತ್ತಿ ಸ್ಪರ್ಶ ಮಣಿಯನ್ನು ಮುಟ್ಟಿದ ನಂತರ ಚಿನ್ನವಾಗಿಬಿಡುತ್ತದೆ. ಕತ್ತಿಯ ಆಕಾರವೇನೋ ಹಾಗೆಯೇ ಉಳಿದುಕೊಳ್ಳುತ್ತದೆ. ಆದರೆ ಅದು ಯಾವುದನ್ನೂ ಕತ್ತರಿಸಲಾರದು.

✿ ಆತನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಯಾವು ದಾದರೂ ಒಂದು ಭಾವವನ್ನು ಆಶ್ರಯಿಸಿಕೊಳ್ಳಬೇಕಾಗುತ್ತದೆ—ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ ಇವುಗಳಲ್ಲಿ ಯಾವು ದಾದರೂ ಒಂದನ್ನು.

ದಾಸ್ಯ—ಹನುಮಂತನದು. ರಾಮನ ಕೆಲಸ ಮಾಡುತ್ತಿರು ವಾಗ ಸಿಂಹಪರಾಕ್ರಮಿಯಾಗುತ್ತಿದ್ದ. ಸತಿಯಲ್ಲೂ ಈ ಭಾವ ಇರುತ್ತದೆ—ಪ್ರಾಣಾಪಾಯವನ್ನು ಲೆಕ್ಕಿಸದೆ ಪತಿಸೇವೆ ಮಾಡು ತ್ತಾಳೆ. ತಾಯಿಯಲ್ಲೂ ಇದು ಅಲ್ಪಸ್ವಲ್ಪ ಇರುತ್ತದೆ—ಯಶೋದೆ ಯಲ್ಲಿ ಇದ್ದ ಹಾಗೆ.

✿ ಎಲ್ಲೋ ಕೆಲವರಿಗೆ ಮಾತ್ರ ಸಮಾಧಿಯುಂಟಾಗಿ ಈ 'ಅಹಂ' ಎಂಬುದು ಹೊರಟುಹೋಗುವುದೇನೋ ನಿಜ; ಆದರೆ ಇದು ಪ್ರಾಯಿಕವಾಗಿ ಹೋಗುವುದಿಲ್ಲ. ಸಾವಿರ ವಿಚಾರ ಮಾಡು, 'ಅಹಂ' ತಿರುತಿರುಗಿ ಬಂದುಬಿಡುತ್ತದೆ. ಅಶ್ವತ್ಥ ವೃಕ್ಷ ವನ್ನು ಚೆನ್ನಾಗಿ ಬುಡದವರೆಗೆ ಕತ್ತರಿಸಿಹಾಕಿಬಿಟ್ಟು ಮಾರನೆ ದಿನ ಹೋಗಿ ನೋಡಿದರೆ, ಆಗಲೇ ಅದು ಚಿಗುರಿಬಿಟ್ಟಿರುತ್ತದೆ.

ನೀನು ಬದುಕಿಕೊಂಡಿರುವವರೆಗೆ, 'ಹೇ ಭಗವಂತ, ನೀನು ಪ್ರಭು, ನಾನು ದಾಸ' ಎಂಬ ಭಾವದಿಂದ ಬದುಕಿಕೊಂಡಿರು. 'ನಾನು ದಾಸ,' 'ನಾನು ಭಕ್ತ' ಎಂಬ 'ಅಹಂ' ಕೆಡುಕಾದ 'ಅಹಂ' ಏನಲ್ಲ. ಸಿಹಿ ತಿಂದರೆ ಹೊಟ್ಟೆಯಲ್ಲಿ ಹುಳಿ ಅಧಿಕವಾಗುವುದೇನೋ ನಿಜ. ಆದರೆ ಕಲ್ಲುಸಕ್ಕರೆ ಸಿಹಿಪದಾರ್ಥಗಳ ಗುಂಪಿಗೆ ಸೇರಿಲ್ಲ.

✿ ಒಂದು ಗಳುವಿನ ತುಂಡು ತೆಗೆದು ಕೊಂಡು ನೀರಿನ ಮೇಲೆ ಗೆರೆ ಎಳೆದೆ ಅಂತ ಇಟ್ಟುಕೊ. ನೀರು ಇಬ್ಭಾಗವಾದ ಹಾಗೆ ಕಾಣು ತ್ತದೆ. ಆದರೆ ಆ ಗೆರೆ ಹೆಚ್ಚುಕಾಲ ನಿಲ್ಲದು. 'ದಾಸ ಅಹಂ', 'ಭಕ್ತ ಅಹಂ', 'ಬಾಲಕ ಅಹಂ' ಇವು 'ಅಹಂ'ನ ಗೆರೆ ಮಾತ್ರ.

✿ ಕೆಲವರು ಸಮಾಧಿ ದೊರೆತ ನಂತರವೂ 'ಭಕ್ತ ಅಹಂ' ಅಥವಾ 'ದಾಸ ಅಹಂ' ಇವನ್ನು ಇಟ್ಟುಕೊಂಡಿರುತ್ತಾರೆ. ಭಕ್ತ 'ಭಕ್ತ ಅಹಂ' ಇಟ್ಟುಕೊಂಡಿರುತ್ತಾನೆ. ಆತ ಹೇಳುತ್ತಾನೆ: 'ಹೇ ಭಗವಂತ, ನೀನು ಪ್ರಭು, ನಾನು ದಾಸ; ನೀನು ಭಗವಂತ, ನಾನು ಭಕ್ತ.' ಭಗವಂತನ ಸಾಕ್ಷಾತ್ಕಾರ ದೊರೆತ ನಂತರವೂ ಈ ಭಾವ ಆತ ನಲ್ಲಿರುತ್ತದೆ. ಆತನ 'ಅಹಂ' ಪೂರ್ಣವಾಗಿ ಹೊರಟುಹೋಗದು. ಈ ವಿಧದ ಭಾವವನ್ನು ಕಾರ್ಯತಃ ಆಚರಣೆಗೆ ತರುತ್ತ ತರುತ್ತ ಕೊನೆಗೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಇದಕ್ಕೇ ಭಕ್ತಿಯೋಗ ಅಂತ ಹೆಸರು.

✿ 'ನಾನು ದಾಸ, ನಾನು ಸೇವಕ' ಎಂಬ ಇದೊಂದಿಷ್ಟು 'ಅಹಂ' ಇರುವುದು ಒಳ್ಳೆಯದು. ಎಲ್ಲಿಯವರೆಗೆ ಮನುಷ್ಯನಿಗೆ ಎಲ್ಲವನ್ನೂ ತಾನು ಮಾಡುವುದು ಎಂಬ ಭಾವನೆ ಇರುವುದೊ ಅಲ್ಲಿಯವರೆಗೆ ಆತನಿಗೆ ತಾನು ದಾಸ, ಭಗವಂತ ಪ್ರಭು ಎಂಬ ಭಾವನೆ ಇರುವುದು ಒಳ್ಳೆಯದು. ಎಲ್ಲವನ್ನೂ ಮಾಡುತ್ತಿರು ವವನು ತಾನೇ ಎಂಬ ಭಾವನೆ ಇರುವವರೆಗೆ ಸೇವ್ಯಸೇವಕ ಭಾವ ದಿಂದಿರುವುದೇ ಒಳ್ಳೆಯದು.

✿ ಭಕ್ತ ಭಗವಂತನನ್ನು ಸಂಬೋಧಿಸಿ ಹೇಳಬೇಕು: 'ನೀನು ತಾಯಿ, ನಾನು ನಿನ್ನ ಸಂತಾನ; ನೀನು ಪ್ರಭು, ನಾನು ನಿನ್ನ ದಾಸ.' ಸೇವ್ಯ-ಸೇವಕಭಾವವೇ ಶ್ರೇಯಸ್ಕರ. ಈ ದಾಸಭಾವ ದಿಂದ ಉಳಿದ ಭಾವಗಳು—ಶಾಂತ, ಸಖ್ಯ ಇತ್ಯಾದಿ—ಉದ್ಭವ ವಾಗುತ್ತವೆ. ಯಜಮಾನ ದಾಸನನ್ನು ಪ್ರೀತಿಸುವಾಗ ಬೇಕಾದರೆ ಆತ ಹೇಳಬಹುದು: 'ಬಾ, ನನ್ನ ಹತ್ತಿರ ಕುಳಿತುಕೊ; ನನಗೂ ನಿನಗೂ ಯಾವ ಭೇದವೂ ಇಲ್ಲ.' ಆದರೆ ದಾಸ ಏಕಾಏಕಿ ಯಜಮಾನನ ಹತ್ತಿರ ಕುಳಿತುಕೊಳ್ಳಲು ಹೋದರೆ, ಯಜಮಾನ ನಿಗೆ ಕೋಪ ಬರುವುದಿಲ್ಲವೆ?

ಶ್ರೀರಾಮಕೃಷ್ಣ ವಚನವೇದದಿಂದ

# ಮನಃಶಾಂತಿ

ಸ್ವಾಮಿ ಮುಕ್ತಿರೂಪಾನಂದ

ಆಧುನಿಕ ಸಮಾಜದಲ್ಲಿ ಆರೋಗ್ಯಕರ ಜೀವನ ನಡೆಸಲು ಮನಃಶಾಂತಿ, ನೆಮ್ಮದಿ ಅತ್ಯಗತ್ಯವಾಗಿ ಬೇಕಾದ ಒಂದು ಸಂಗತಿಯಾಗಿದೆ. ಈ ಕುರಿತು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿರುವ ಲೇಖಕರು ಸಿಂಗಾಪುರ ರಾಮಕೃಷ್ಣ ಮಿಷನ್ನಿನ ಅಧ್ಯಕ್ಷರಾಗಿದ್ದರು. ಬಹುಶ್ರುತ ವಿದ್ವಾಂಸರೂ, ಚಿಂತಕರೂ, ಉತ್ತಮ ಲೇಖಕರೂ ಆಗಿರುವ ಪೂಜ್ಯರು ಪ್ರಸ್ತುತ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.

ಬಹು ಜನರ ಬಯಕೆ ಯಾವುದಾದರೂ ಶಾಂತ, ಏಕಾಂತವಾದ ಸ್ಥಳಕ್ಕೆ ಹೋಗಿ ಕೆಲವು ದಿನಗಳನ್ನು ನೆಮ್ಮದಿಯಿಂದ ಕಳೆಯಬೇಕೆಂಬುದು. ಶಾಂತವಾದ ಮನಸ್ಸಿಗೆ ಮತ್ತು ಶರೀರಕ್ಕೆ ಸ್ವಲ್ಪ ದಿನವಾದರೂ ವಿಶ್ರಾಂತಿಯನ್ನು ಕೊಡಬೇಕೆಂಬ ಹಂಬಲಿಕೆಯಿಂದ ಹಾಗೆ ಅವರು ಬಯಸುತ್ತಾರೆ. ಜಗತ್ತು ಒಂದು ಕುರುಕ್ಷೇತ್ರ. ಅದರಲ್ಲಿ ಇರಬೇಕೆಂದರೆ ಸಂಘರ್ಷ, ಖಿನ್ನತೆ, ನಿರಾಶೆ ಮತ್ತು ಶೋಕತಾಪಗಳು ಅನಿವಾರ್ಯ. ಅವುಗಳಿಂದ ಸ್ವಲ್ಪ ಸಮಯವಾದರೂ ಪಾರಾಗಿ, ನಿಶ್ಚಿಂತೆಯಿಂದ—ವಿಶೇಷವಾಗಿ ದಟ್ಟ ಜನಸಂದಣಿಯಿಂದ, ಸದ್ದುಗದ್ದಲಗಳಿಂದ ತ್ರಸ್ತರಾದ ಶಹರವಾಸಿಗಳು ಪ್ರಶಾಂತವಾದ, ಮನಸ್ಸಿಗೆ ಹಿತಕರವಾದ ಪರಿಸರದಲ್ಲಿ ಇರಲು ಬಯಸುವುದು ಸ್ವಾಭಾವಿಕ. ಎಲ್ಲರಿಗೂ ಅಧ್ಯಾತ್ಮ ಜೀವನ ರುಚಿಸುವುದಿಲ್ಲ, ಎಲ್ಲರೂ ಭಗವಂತನನ್ನು ನೋಡಲು ಬಯಸುವುದಿಲ್ಲ. ಈ ಜಗತ್ತಿನಲ್ಲಿಯೇ ಇದ್ದು, ಸಂಸಾರದಲ್ಲಿಯೇ ಸುಖ, ಸಂತೋಷವನ್ನು ಪಡೆಯಬೇಕೆಂಬುದು ಅಧಿಕಾಂಶ ಮಂದಿಯ ಇಚ್ಛೆ. ಉದ್ದೇಶಗಳು ಬೇರೆ ಇರಬಹುದು. ಆದರೆ ಒಂದು ವಿಷಯದಲ್ಲಿ ಮಾತ್ರ ಎಲ್ಲರಿಗೂ ಏಕಾಭಿಪ್ರಾಯವಿದೆ: ಪ್ರತಿ ಜೀವಿಯ ಧ್ಯೇಯ ಬದುಕಿರುವಷ್ಟು ದಿನ ಶೋಕತಾಪಗಳಿಲ್ಲದೆ ಶಾಂತಿ ಆನಂದಗಳಿಂದಿರಬೇಕೆಂಬುದು. ಬಡವರಿಂದ ಶ್ರೀಮಂತರವರೆಗೂ, ಪಾಮರರಿಂದ ಪಂಡಿತರವರೆಗೂ ಇರುವ ಏಕೈಕ ಬಯಕೆ ಇದೆಂದು ಹೇಳಬಹುದು. ಆದುದರಿಂದಲೇ ಬುದ್ಧ ಹೇಳಿದ: ''ಜೀವನದಲ್ಲಿ ದುಃಖವಿದೆ, ಆ ದುಃಖಕ್ಕೆ ಕಾರಣವಿದೆ, ಮತ್ತು ಆ ದುಃಖದಿಂದ ವಿಮೋಚನೆ ಪಡೆಯಲು ಮಾರ್ಗವಿದೆ.'' ಬೌದ್ಧಧರ್ಮ ಇದಕ್ಕಾಗಿಯೇ ಬಹು ಜನಪ್ರಿಯವಾಯಿತು. ಸಮಸ್ಯೆಯಿರುವುದು ಗುರಿಯಲ್ಲಲ್ಲ, ಆದರೆ ಅದನ್ನು ಹೇಗೆ ಸಾಧಿಸಬೇಕೆಂಬುದನ್ನು ಕುರಿತು. ಪ್ರತಿ ವ್ಯಕ್ತಿ ಹಗಲಿರುಳು ಶ್ರಮಪಡುತ್ತಿರುವುದು ಸುಖ ಸಂತೋಷಗಳನ್ನು ಪಡೆಯುವುದಕ್ಕಾಗಿಯೇ. ಕೆಲವು ಸಲ ಇನ್ನೇನು ಸಿಕ್ಕಿದವು ಎಂದು ಸಂತಸಪಡುತ್ತಿರುವಾಗಲೇ ಅವು ಕೈಯಿಂದ ಜಾರಿ ಮಾಯವಾಗುತ್ತವೆ. ಮತ್ತೆ ಮೊದಲಿನ ಸ್ಥಿತಿಯೇ ಪ್ರಾರಂಭವಾಗುತ್ತದೆ. ಇಡೀ ಬದುಕು ಈ ಕಣ್ಣುಮುಚ್ಚಾಲೆ ಆಟದಲ್ಲಿ ನಮಗರಿವಿಲ್ಲದೆಯೇ ನಶಿಸಿ ಹೋಗುತ್ತದೆ.

ಗ್ರೀಕ್ ಪುರಾಣದಲ್ಲಿ ಸಿಸಿಫಸ್ ಎಂಬುವನ ಕತೆಯಿದೆ. ಸಿಸಿಫಸ್ ತಾನು ಮಾಡಿದ ಅಪರಾಧಕ್ಕಾಗಿ ದೇವತೆಗಳಿಂದ ಒಂದು ವಿಚಿತ್ರ ಶಿಕ್ಷೆಗೆ ಗುರಿಯಾದನು. ಅವನ ಚಿರಂತನ ಕರ್ಮವೆಂದರೆ ಒಂದು ಭಾರವಾದ ಬಂಡೆಯನ್ನು ಗುಡ್ಡದ ತುದಿಗೆ ನೂಕುವುದು. ಇನ್ನೇನು ತುದಿ ಮುಟ್ಟಿತು ಎನ್ನುವಾಗ ಅದು ಕೆಳಕ್ಕೆ ಉರುಳುವುದು; ಮತ್ತೆ ಅದನ್ನು ನೂಕಿಕೊಂಡು ತುದಿಗೆ ಹೋಗುವುದು. ಇದೇ ಅವನು ಅನುಭವಿಸುವ ಶಿಕ್ಷೆ ಅಥವಾ ನಾವು ಅನುಭವಿಸುತ್ತಿರುವ ಶಾಸ್ತಿ. ನೆರಳಿನಂತೆ ಹಿಂಬಾಲಿಸುತ್ತಿರುವ ಈ ತಾಪತ್ರಯಗಳಿಂದ ಎಷ್ಟು ಪ್ರಯತ್ನಿಸಿದರೂ ಬಿಡುಗಡೆಯಾಗುವ ಮಾರ್ಗ ನಮಗೆ ಗೋಚರಿಸುವುದಿಲ್ಲ. ಇವುಗಳು ಬರುವುದು ಎಲ್ಲಿಂದ? ಎಲ್ಲಿದೆ ಇವುಗಳ ಉಗಮಸ್ಥಾನ? ಇವು ಆಕಾಶದಿಂದಾಗಲಿ, ಮರಗಳಿಂದಾಗಲಿ, ಬಿದ್ದು ನಮ್ಮನ್ನು ಆಕ್ರಮಿಸಿಕೊಳ್ಳುವದಿಲ್ಲ; ನಾವು ಉಸಿರಾಡುವ ವಾತಾವರಣದಿಂದಾಗಲಿ ಅಥವಾ ತಿನ್ನುವ ಆಹಾರದಿಂದಾಗಲಿ ಬರುವುದಿಲ್ಲ. ಅವುಗಳ ಜನ್ಮಸ್ಥಾನ, ಕಾರಣ ಗೊತ್ತಾಗದಿದ್ದರೆ, ಅವುಗಳಿಂದ ಪಾರಾಗುವ ಮಾರ್ಗ ನಮಗೆ ಹೊಳೆಯುವುದಿಲ್ಲ. ಆದರೆ ಈ ದುಃಖ, ವ್ಯಸನಗಳನ್ನು ನಿಲ್ಲಿಸುವುದು ಸಾಧ್ಯ ಮತ್ತು ಅದಕ್ಕೆ ದಾರಿಯಿದೆಯೆಂದು ಪ್ರಾಜ್ಞರು ನಮಗೆ ಭರವಸೆ ಕೊಡುತ್ತಾರೆ. ನಮ್ಮ ಶೋಕ, ಪರಿತಾಪಗಳ ಕಾರಣ ಹಾಗೂ ಅವು

ಗಳ ನಿವಾರಣೆಯ ಉಪಾಯವನ್ನು ಶ್ರೀ ಶಂಕರಾಚಾರ್ಯರು ತಮ್ಮ *'ವಿವೇಕ ಚೂಡಾಮಣಿ'* ಯಲ್ಲಿ ಹೇಳಿದ್ದಾರೆ:

**ಬಾಹ್ಯೇ ನಿರುದ್ಧೇ ಮನಸಃ ಪ್ರಸನ್ನತಾ**
**ಮನಃ ಪ್ರಸಾದೇ ಪರಮಾತ್ಮ ದರ್ಶನಮ್ ।**
**ತಸ್ಮಿನ್ ಸುದೃಷ್ಟೇ ಭವಬಂಧನಾಶೋ**
**ಬಹಿರ್ನಿರೋಧಃ ಪದವೀ ವಿಮುಕ್ತೇಃ ॥** *(ಶ್ಲೋಕ, ೩೩೫)*

''ಬಾಹ್ಯ ಜಗತ್ತು ಮನಸ್ಸನ್ನು ಪ್ರವೇಶಿಸುವುದನ್ನು ನಿಲ್ಲಿಸಿದರೆ ಮನಸ್ಸು ಶಾಂತವಾಗಿ ಪ್ರಸನ್ನವಾಗುತ್ತದೆ. ಆತ್ಮಸಾಕ್ಷಾತ್ಕಾರದಿಂದ ಸಂಸಾರ ಬಂಧನವು ನಾಶವಾಗುತ್ತದೆ. ಆದುದರಿಂದ ಬಾಹ್ಯ ಜಗತ್ತಿನ ಪ್ರವೇಶವನ್ನು ನಿಲ್ಲಿಸುವುದೇ ಮುಕ್ತಿಗೆ ಮಾರ್ಗವು.''

ಆತ್ಮ, ಪರಮಾತ್ಮ ಇತ್ಯಾದಿ ವಿಷಯಗಳಲ್ಲಿ ಬಹು ಜನರು ಆಸ್ಥೆಯನ್ನು ತೋರಿಸದಿದ್ದರೂ ಮನಸ್ಸಿನ ಶಾಂತಿ ಮತ್ತು ಪ್ರಸನ್ನತೆಗಳ ವಿಷಯದಲ್ಲಿ ದ್ವಿಮತವಿಲ್ಲ. ನಾವು ಮತ್ತು ನಮಗಿಂತ ಮೊದಲು ಬಂದವರು ಜಗತ್ತಿನ ಮೂಲೆ ಮೂಲೆಯನ್ನೂ ಶಾಂತಿಗಾಗಿ ಹುಡುಕಿ ವಿಫಲರಾಗಿದ್ದೇವೆ, ನಿರಾಶರಾಗಿದ್ದೇವೆ. ಆದರೆ ಯಾರೂ ಈ ಅನ್ವೇಷಣೆಯನ್ನು ತ್ಯಜಿಸಿಲ್ಲ. ಇವತ್ತು ಇಲ್ಲದಿದ್ದರೆ ನಾಳೆ ಜಯಶಾಲಿಗಳಾಗುತ್ತೇವೆಂಬ ಭ್ರಮೆ ನಮ್ಮನ್ನು ಬಿಟ್ಟಿಲ್ಲ. ಶ್ರೀ ಶಂಕರಾಚಾರ್ಯರು ನಾವು ಯಾವ ದಿಕ್ಕಿನಲ್ಲಿ ಅರಸುತ್ತಿದ್ದೇವೆಯೋ ಅದರ ವಿರುದ್ಧ ದಿಕ್ಕಿನಲ್ಲಿ ಚಲಿಸಲು ಹೇಳಿದ್ದಾರೆ. ''ಮನಸ್ಸು ಬಾಹ್ಯ ಜಗತ್ತಿನ ವಿಷಯವನ್ನು ಕುರಿತು ಚಿಂತಿಸುವುದನ್ನು ನಿಲ್ಲಿಸಿದರೆ ಮಾತ್ರ ನಾವು ಬಹುಕಾಲದಿಂದ ಹುಡುಕುತ್ತಿರುವ ಶಾಂತಿ-ಸಂತೋಷಗಳು ಸಿಗುತ್ತವೆ'' ಎನ್ನುತ್ತಾರೆ. ಇದೊಂದು ಅರ್ಥಗರ್ಭಿತವಾದ ಉಪದೇಶ. ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು.

ಈ ಉಕ್ತ ಸಾಲಿನಲ್ಲಿ ಎರಡು ಉಲ್ಲೇಖವಿದೆ. ಒಂದು ಮನಸ್ಸು ಮತ್ತು ಇನ್ನೊಂದು ಜಗತ್ತು. ಪ್ರಪಂಚವೆಂದರೇನು, ಅದು ಮನಸ್ಸನ್ನು ಪ್ರವೇಶಿಸುವುದನ್ನು ತಡೆಯುವುದು ಹೇಗೆ? ನಾವಿರುವ ಪ್ರಪಂಚ ಜಡ ಮತ್ತು ಚೇತನ ವಸ್ತುಗಳಿಂದ ತುಂಬಿದೆ. ಪಂಚೇಂದ್ರಿಯಗಳ ಮೂಲಕ ಜಗತ್ತಿನ ಅಸ್ತಿತ್ವದ ಅರಿವು ನಮಗಾಗುತ್ತದೆ. ಇಂದ್ರಿಯಗಳಿಂದ ಗ್ರಹಿಸಿದ ಬಾಹ್ಯ ವಸ್ತುಗಳ ಜ್ಞಾನ ಮನಸ್ಸಿನಲ್ಲಿ ಸಂಗ್ರಹವಾಗುತ್ತದೆ. ಪ್ರತಿ ಪದಾರ್ಥಕ್ಕೆ ನಾಮ-ರೂಪಗಳಿವೆ. ಆ ನಾಮ-ರೂಪಗಳು ನಮ್ಮ ಮನಸ್ಸಿನಲ್ಲಿ ಶೇಖರವಾಗುತ್ತವೆ. ಇದೇ ನಮ್ಮ ನೆನಪುಗಳ ಸಮೂಹ. ವಿದ್ಯಾರಣ್ಯರು ತಮ್ಮ 'ಪಂಚದಶಿ' ಯಲ್ಲಿ 'ನಾಮರೂಪಾತ್ಮಕಂ ಜಗತ್' ಎಂದು ಇದನ್ನು ಸಂಕ್ಷೇಪಿಸಿ ಹೇಳಿದ್ದಾರೆ. ಹೆಸರು ಮತ್ತು ಆಕಾರಗಳಿಲ್ಲದ ವಸ್ತುಗಳನ್ನು ಇಂದ್ರಿಯಗಳು ಗ್ರಹಿಸಲಾರವು. ಆದುದರಿಂದ ಭಗವಂತನ ಅನಂತತೆಯನ್ನು ಆಕಾಶಕ್ಕೆ, ಅವನ ಅಪಾರಶಕ್ತಿಯನ್ನು ತೀರವಲ್ಲದ ಸಮುದ್ರಕ್ಕೆ, ಅವನ ಅಮೂರ್ತ ಸರ್ವವ್ಯಾಪಿತ್ವವನ್ನು ವಾಯುವಿಗೆ ಹೋಲಿಸುತ್ತೇವೆ. ನಾವು ಯಾವುದನ್ನು ನಾಮರೂಪಗಳ ಸಹಾಯದಿಂದ ಗ್ರಹಿಸಬಲ್ಲೆವೋ ಅವುಗಳ ಮಾಧ್ಯಮದಿಂದ ಭಗವಂತ ಈ ರೀತಿಯಾಗಿ ಇರಬಹುದೆಂದು ಕಲ್ಪಿಸಿಕೊಳ್ಳುತ್ತೇವೆ. ಹೆಸರು, ರೂಪಗಳಿಲ್ಲದೆ ಯೋಚನೆ ಮಾಡುವುದು ಅಸಾಧ್ಯ. ಪರಿಚಿತರ ಹೆಸರನ್ನು ಕೇಳಿದರೆ ಅವರ ರೂಪ ಮನಸ್ಸಿನಲ್ಲಿ ಮಿಂಚುತ್ತದೆ ಮತ್ತು ಅವರ ರೂಪವನ್ನು ನೋಡಿದರೆ ಹೆಸರು ಸ್ಫುರಿಸುತ್ತದೆ. ನಮ್ಮ ಎಲ್ಲ ಆಲೋಚನೆಗಳ ಭಿತ್ತಿ ಇದೇ.

ನಮ್ಮ ಆಲೋಚನೆಯೆಂದರೆ ಶಬ್ದ ಮತ್ತು ರೂಪ. ಮನಸ್ಸು ಆಲೋಚನೆಗಳಿಂದ ತುಂಬಿದೆ, ಅಥವಾ ಯೋಚನಾಮಗ್ನವಾಗಿದೆಯೆಂದರೆ, ಜಡ ಅಥವಾ ಚೇತನ ವಸ್ತುಗಳಿಂದ ಆಕ್ರಮಿಸಲ್ಪಟ್ಟಿದೆ ಎಂದರ್ಥ. ನಾವು ಯೋಚಿಸಲು ಪ್ರಾರಂಭಿಸಿದ ತಕ್ಷಣ ಜಗತ್ತು ಮನಸ್ಸಿನಲ್ಲಿ ಪ್ರತ್ಯಕ್ಷವಾಗುತ್ತದೆ. ನಿಲ್ಲಿಸಿದ ತಕ್ಷಣ ಅದು ಅದೃಶ್ಯವಾಗುತ್ತದೆ. ಉದಾಹರಣೆಗಾಗಿ ನಿದ್ರೆಯಲ್ಲಿ ಮೂರ್ಛೆಯ ಅವಸ್ಥೆಗಳಲ್ಲಿ ಜಗತ್ತಿರುವುದಿಲ್ಲ. ಯೋಗಿಗಳಿಗೆ ಸಮಾಧಿಯ ಅವಸ್ಥೆಯಲ್ಲಿಯೂ ಅದು ಇರುವುದಿಲ್ಲ. ಜಗತ್ತು ನಮಗೆ ಬಿಡದೆ ಅಂಟಿಕೊಂಡಿದೆಯೋ ಅಥವಾ ನಾವು ಅದನ್ನು ಬಿಗಿಯಾಗಿ ಹಿಡಿದುಕೊಂಡಿದ್ದೇವೆಯೊ? ಪ್ರಪಂಚಕ್ಕೆ ನಮ್ಮ ವಿಷಯದ ಯಾವ ಅನುರಾಗವೂ ಇಲ್ಲ. ನಮ್ಮ ಅಸ್ತಿತ್ವದ ಅರಿವೇ ಅದಕ್ಕಿಲ್ಲ. ಪ್ರತಿದಿನ ಲಕ್ಷಗಟ್ಟಲೆ ಶಿಶುಗಳು ಜನಿಸುತ್ತವೆ, ಲಕ್ಷಗಟ್ಟಲೆ ಜನರು ಸಾಯುತ್ತಾರೆ. ಅದರಿಂದ ಪ್ರಪಂಚಕ್ಕೆ ಯಾವ ಆನಂದವೂ ಇಲ್ಲ. ಯಾವ ಶೋಕವೂ ಇಲ್ಲ. ಅದು ಸ್ವರ್ಗವೂ ಅಲ್ಲ, ನರಕವೂ ಅಲ್ಲ. ಅದು ತಟಸ್ಥ ಕ್ಷೇತ್ರ. ನಾವು ಯಾವ ರೀತಿಯಾಗಿ ಅದನ್ನು ನೋಡಲು ಬಯಸುತ್ತೇವೆಯೋ ಆ ರೀತಿಯಾಗಿ ಕಾಣುತ್ತದೆ. ಸುಖದಲ್ಲಿರುವಾಗ ಸ್ವರ್ಗ, ಶೋಕದಲ್ಲಿರುವಾಗ ನರಕ. ಇವೆರಡರಲ್ಲಿ ಯಾವುದು ಸತ್ಯ? ಎಲ್ಲಿಯವರೆಗೆ ನಾವು ಆಸೆಗಳ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಅದರ ಹಿಂದೆ ಓಡುತ್ತೇವೆಯೋ ಅಲ್ಲಿಯವರೆಗೆ ಅದು ಕಣ್ಣುಮುಚ್ಚಾಲೆಯ ಆಟವನ್ನು ಆಡುತ್ತದೆ. ಅದರ ವಿಷಯದಲ್ಲಿ ಉದಾಸೀನತೆಯನ್ನು ತೋರಿಸಿದರೆ ಅದು ನಮ್ಮನ್ನು ಹಿಂಬಾಲಿಸುತ್ತದೆ.

ಜಗತ್ತಿನಲ್ಲಿಯೇ ಶಾಂತಿ, ಸಂತೋಷಗಳನ್ನು ಪಡೆಯಲು ಸಾಧ್ಯ ಎಂಬ ನಂಬಿಕೆ ವಿಶ್ವಾಸಾರ್ಹವಲ್ಲ. ಈ ನಂಬಿಕೆಯನ್ನು ನೆಚ್ಚಿ ಯಾರೂ ಜಯಶಾಲಿಗಳಾಗಿಲ್ಲ. ಪ್ರಪಂಚ ಪುನಃ ಪುನಃ ನಮ್ಮನ್ನು ನಿರಾಶೆ, ಚಿಂತೆ, ಶೋಕ, ತಾಪಗಳ ಚಾಟಿಯೇಟಿನಿಂದ ಶಾಂತಿ ಸಂತೋಷಗಳಿಗಾಗಿ ತನ್ನ ಮೇಲೆ ನಿರ್ಭರವಾಗದಿರಲು ಎಚ್ಚರಿಸುತ್ತದೆ. ಆದರೂ ನಮ್ಮ ಸ್ವಭಾವದಲ್ಲಿ ಪರಿವರ್ತನೆಯಾಗುವುದಿಲ್ಲ. ಶ್ರೀರಾಮಕೃಷ್ಣರು ಹೇಳಿದಂತೆ—''ಒಂಟೆಗೆ ನೆಗ್ಗಲು ಮುಳ್ಳು ಕಂಡರೆ ಬಹಳ ಪ್ರೀತಿ. ಅದನ್ನು ತಿಂದಂತೆಲ್ಲಾ ಒಂಟೆಯ ಬಾಯಿಯಿಂದ ರಕ್ತ ಹರಿಯಲಾರಂಭಿಸುತ್ತದೆ. ಆದರೂ ಅದಕ್ಕೆ ಮುಳ್ಳೇ ಬೇಕು. ಅದನ್ನು ತಿನ್ನುವುದನ್ನು ಎಂದಿಗೂ ಬಿಡದು. ಸಂಸಾರಿಗಳು ಬಹಳವಾಗಿ ಶೋಕ, ತಾಪಗಳಿಂದ ಬೆಂದು ಬೆಂಡಾಗುತ್ತಾರೆ. ಆದರೂ ಕೆಲವು ದಿನಗಳಲ್ಲೇ ಎಲ್ಲವನ್ನೂ ಮರೆತು ಹಿಂದಿನ ಮೂರ್ತಿಗಳೇ ಆಗಿಬಿಡುತ್ತಾರೆ.'' ಶಾರದಾದೇವಿಯವರು ಸಹ ತಮ್ಮ ಭಕ್ತರು ತಮಗೆ ಮನಃಶಾಂತಿಯಿಲ್ಲ, ಮನಃಶಾಂತಿಯಿಲ್ಲ

ಎಂದು ಗೊಣಗಿದಾಗ ಅವರಿಗೆ ಹೇಳುತ್ತಿದ್ದರು: ''ಈ ಜಗತ್ತಿನ ವಿಷಯದಲ್ಲಿ ನಿನ್ನ ಆಸಕ್ತಿ ಎಷ್ಟು ಕಡಿಮೆಯಾಗುವುದೋ ಅಷ್ಟು ಹೆಚ್ಚಾಗಿ ಶಾಂತಿಯನ್ನು ಅನುಭವಿಸುವೆ.'' ಈ ಜಗತ್ತಿನಲ್ಲಿ ಶಾಂತಿಯಿಲ್ಲ. ಯಾವುದು ಅಲ್ಲಿ ಇಲ್ಲವೋ ಅದನ್ನು ಅದು ಕೊಡಲಾರದು. ಜಗತ್ತಿನ ರಚನೆಯು ಅವ್ಯವಸ್ಥಿತವಾದದ್ದು, ಅದು ಸದಾ ಪರಿವರ್ತನಶೀಲ. ಶಾಂತಿ, ಆನಂದಗಳು ವ್ಯಕ್ತಿಯ ಮನಃಸ್ಥಿತಿ. ಅವು ಪ್ರಪಂಚದ ಸ್ಥಿತಿಯಲ್ಲ. ವ್ಯಕ್ತಿ ಬದಲಾಗಬೇಕೇ ಹೊರತು ಜಗತ್ತು ಬದಲಾಗುವುದಿಲ್ಲ.

ನಮ್ಮಲ್ಲಿ ಪರಿವರ್ತನೆಯಾಗಬೇಕು. ಮನಸ್ಸೇ ನಮ್ಮ ಅಧ್ಯಯನದ ವಿಷಯವಸ್ತುವಾಗಬೇಕು. ಏಕೆಂದರೆ ಮನಸ್ಸಿನ ಮೂಲಕವೇ ನಾವು ಹೊರಗಿನ ಜಗತ್ತಿನ ವಿಷಯಗಳನ್ನು ತಿಳಿದುಕೊಳ್ಳುತ್ತೇವೆ. ನಮ್ಮ ಕ್ರಿಯೆ ಮತ್ತು ಪ್ರತಿಕ್ರಿಯೆಗಳು ಅದನ್ನೇ ಅವಲಂಬಿಸಿವೆ. ಮನಸ್ಸು ನಮಗೆ ಬಹಳ ಹತ್ತಿರವಾದರೂ ದೂರದಲ್ಲಿದೆ. ಏಕೆಂದರೆ ಅದರ ವಿಷಯ ನಮಗೆ ಗೊತ್ತಿರುವುದು ಕಡಿಮೆ. ನಮ್ಮ ಅರಿವೆಲ್ಲ ಪ್ರಪಂಚದ ಚಟುವಟಿಕೆಗಳ ಮತ್ತು ಘಟನೆಗಳ ಮೇಲೆ ಕೇಂದ್ರೀಕೃತವಾಗಿದೆ. ಆದುದರಿಂದ ಮನಸ್ಸಿನ ಸ್ಥಿತಿಗತಿಗಳನ್ನು ಲಕ್ಷಿಸಲು ನಮಗೆ ಸಮಯವೂ ಇಲ್ಲ, ಇಚ್ಛೆಯೂ ಇಲ್ಲ. ಪ್ರಪಂಚದ ಮೇಲಿರುವ ನಮ್ಮ ಹಿಡಿತ ಸ್ವಲ್ಪ ಸಡಿಲಾಗಬೇಕು. ಶ್ರೀರಾಮಕೃಷ್ಣರ ಅಂತರಂಗ ಶಿಷ್ಯರಾದ ಸ್ವಾಮಿ ತುರೀಯಾನಂದರು ಒಂದು ಕತೆಯನ್ನು ಹೇಳುತ್ತಿದ್ದರು: ''ಒಬ್ಬ ರಾಜನಿದ್ದ. ಅವನಿಗೆ ಓರ್ವ ಜ್ಞಾನಿ ಗುರುವಿದ್ದ. ಗುರು ಅರಮನೆಗೆ ಬಂದಾಗಲೆಲ್ಲ ರಾಜ ಅವನಿಗೆ ಬಿನ್ನವಿಸಿಕೊಳ್ಳುತಿದ್ದ, 'ಗುರುಗಳೇ, ದಯವಿಟ್ಟು ನನ್ನನ್ನು ಈ ಸಂಸಾರಬಂಧನದಿಂದ ಬಿಡಿಸಿ ಮುಕ್ತನನ್ನಾಗಿ ಮಾಡಿ.' ಗುರು ಕೆಲವು ಉಪದೇಶಗಳನ್ನು ಕೊಟ್ಟು ಹೊರಟು ಹೋಗುತ್ತಿದ್ದರು. ಪುನಃ ಅವರು ಬಂದಾಗ ರಾಜ ಅದೇ ಪ್ರಾರ್ಥನೆಯನ್ನು ಮುಂದಿಡುತ್ತಿದ್ದ. 'ಮಹಾತ್ಮರೆ, ನನ್ನನ್ನು ಈ ಜಗತ್ತಿನ ಬಂಧನದಿಂದ ಬಿಡುಗಡೆಗೊಳಿಸಿ.' ಒಂದು ದಿನ ಗುರುಗಳು ಅರಮನೆಗೆ ಬಂದು, ಒಂದು ಕಂಬವನ್ನು ಗಟ್ಟಿಯಾಗಿ ತಬ್ಬಿಕೊಂಡು ರಾಜನನ್ನು ಕೂಗಿದರು. 'ಅರಸನೆ, ಬೇಗ ಬಾ, ಈ ಕಂಬದ ಹಿಡಿತದಿಂದ ನನ್ನನ್ನು ಬಿಡಿಸು.' ರಾಜ ಅದನ್ನು ನೋಡಿ ಹೇಳಿದ: 'ನಿಮ್ಮ ಹಿಡಿತವನ್ನು ಬಿಟ್ಟುಬಿಡಿ.' ಗುರು ಉತ್ತರಿಸಿದ: 'ಅದಾಗದು, ನೀನೇ ನನ್ನನ್ನು ಬಿಡಿಸಬೇಕು.' ರಾಜ ನಕ್ಕು ಹೇಳಿದ: 'ಒಳ್ಳೆಯ ವಿನೋದದ ಸಂಗತಿಯಿದು. ಕಂಬವನ್ನು ನೀವೇ ಭದ್ರವಾಗಿ ಹಿಡಿದುಕೊಂಡು ನನ್ನನ್ನು ಬಿಡುಗಡೆ ಮಾಡೆಂದು ಕರೆಯುತ್ತಿದ್ದೀರಿ. ನೀವೇ ಏಕೆ ಬಿಟ್ಟುಬಿಡಬಾರದು?' ಗುರು ಕಂಬವನ್ನು ಬಿಟ್ಟು ಹೇಳಿದರು: 'ನಿನ್ನ ಅವಸ್ಥೆ ಇದಕ್ಕಿಂತ ಬೇರೇನೂ ಅಲ್ಲ. ನೀನು ಈ ಸಂಸಾರವನ್ನು ಗಟ್ಟಿಯಾಗಿ ಹಿಡಿದುಕೊಂಡಿರುವೆ. ನಾನು ಬಂದಾಗಲೆಲ್ಲ ನನ್ನನ್ನು ವಿಮೋಚನೆ ಮಾಡಿ ಎಂದು ಬೇಡುತ್ತಿರುವೆ. ನೀನೇ ಅದನ್ನು ತ್ಯಜಿಸು.' ''

ಆಲೋಚನೆಗಳ ಭಿತ್ತಿಯೇ ಈ ಪ್ರಪಂಚ. ಅದುವೇ ನಮ್ಮ ಅಶಾಂತಿ, ದ್ವೇಷ, ಅಸೂಯೆ, ಅಹಂಕಾರ ಮತ್ತು ಶೋಕಗಳಿಗೆ ಕಾರಣ. ಇದನ್ನು ಎಷ್ಟು ಬೇಗನೆ ತಿಳಿದುಕೊಳ್ಳುತ್ತೇವೆಯೋ ಅಷ್ಟು ನಮಗೆ ಒಳ್ಳೆಯದಾಗುತ್ತದೆ, ಮನಸ್ಸು ಹಗುರಾಗುತ್ತದೆ ಮತ್ತು ಅಂತರ್ಮುಖಿಯಾಗುತ್ತದೆ. ಯೋಚನೆಗಳ ಮುಖಾಂತರ ಪ್ರವೇಶಿಸಿ ನಮ್ಮ ನೆಮ್ಮದಿ ಮತ್ತು ಸ್ಥಿರತೆಯನ್ನು ಕದಡುತ್ತಿರುವ ಪ್ರಪಂಚವನ್ನು ತಡೆದು ನಿಲ್ಲಿಸಿದರೆ ಮನಸ್ಸು ಪ್ರಸನ್ನವಾಗುವುದು. ಅಂತಹ ಆಳವಾದ, ಸ್ಥಿರವಾದ ಮನಸ್ಸು ಜೀವನದ ರಹಸ್ಯಗಳನ್ನು ಭೇದಿಸಬಲ್ಲದು. ಛಿದ್ರಛಿದ್ರವಾದ ಮನಸ್ಸು ಯಾವ ಕ್ಷೇತ್ರದಲ್ಲೂ ಯಶಸ್ವಿಯಾಗಲಾರದು.

ಪ್ರಪಂಚದಲ್ಲಿ ಪ್ರತಿಕ್ಷಣ ಸಂಭವಿಸುತ್ತಿರುವ ಪ್ರಿಯ ಅಥವಾ ಅಪ್ರಿಯ ಘಟನೆಗಳ ಮೇಲೆ ನಮಗೆ ಯಾವ ಹತೋಟಿಯೂ ಇಲ್ಲ ; ಮತ್ತು ಬದಲಾಗುತ್ತಿರುವ ಪರಿಸ್ಥಿತಿಗಳ ಮೇಲೆ ಯಾವ ನಿಯಂತ್ರಣವೂ ಇಲ್ಲ. ಅವು ಬರುತ್ತವೆ ಮತ್ತು ಹೊರಟುಹೋಗುತ್ತವೆ. ಜಗತ್ತು ಅಲ್ಲೋಕಲ್ಲೋಲವಾದ ಸಮುದ್ರ—ಅಲೆಗಳು ಏಳುತ್ತವೆ ಮತ್ತು ಬೀಳುತ್ತವೆ. ಅವುಗಳನ್ನು ತಡೆಯುವ ಶಕ್ತಿ ಮಾನವನಿಗಿಲ್ಲ. ತುಮುಲ ತುಡಿತವಾದ ಈ ಪ್ರಪಂಚದಲ್ಲಿ ನಾವಿರಬೇಕು, ಅಲೆಗಳ ಮಧ್ಯದಲ್ಲಿಯೇ ಈಜಬೇಕು, ತೇಲಬೇಕು. ಓಡಿಹೋಗಲು ಬೇರೆ ದಾರಿಯಿಲ್ಲ. ಮನಸ್ಸಿನ ಸ್ಥಿರತೆ ಮತ್ತು ಸ್ತಿಮಿತಗಳನ್ನು ಕಾಯ್ದುಕೊಂಡು ಇರಲು ಸಾಧ್ಯ. ಅದು ಅವಶ್ಯವೆನಿಸಿದರೆ ನಮ್ಮಲ್ಲಿ ಪರಿವರ್ತನೆಯಾಗಬೇಕು. ಜಗತ್ತು ಮೊದಲು ಬದಲಾಗಲಿ, ನಂತರ ನಮ್ಮ ಬದಲಾವಣೆಗೆ ಯತ್ನಿಸುತ್ತೇವೆ ಎಂಬ ಮನೋಭಾವ ಪಲಾಯನಕ್ಕೆ ಹುಡುಕಿರುವ ಸುಲಭ ದಾರಿ. ಇದರರ್ಥ, ನಾವು ಯಾವ ರೀತಿಯಾಗಿ ಇದ್ದೇವೆಯೋ ಅದೇ ರೀತಿಯಾಗಿ ಇರುವೆವು. ವ್ಯಕ್ತಿಯ ಪರಿವರ್ತನೆಯಾಗದೆ ಸಮುದಾಯದ ಪರಿವರ್ತನೆಯಾಗುವುದಿಲ್ಲ. ನಾವೇ ಅದರ ಪ್ರಥಮ ಪ್ರಯೋಗಶಾಲೆಯಾಗಬೇಕು. ಇದೊಂದು ಅತ್ಯಂತ ಪರಿಣಾಮಕಾರಿಯಾದ ಪ್ರಯೋಗ.

ಇಬ್ಬರು ಬೌದ್ಧಭಿಕ್ಷುಗಳು ತಮ್ಮ ಭಿಕ್ಷೆಗಾಗಿ ಬೇರೊಂದು ಸ್ಥಳಕ್ಕೆ ಹೋಗುತ್ತಿದ್ದರು. ಮಾರ್ಗ ಮಧ್ಯದಲ್ಲಿರುವ ಚಿಕ್ಕ ಹೊಳೆಯನ್ನು ದಾಟಿ ಹೋಗಬೇಕಾಗಿತ್ತು. ಅವರು ಹೊಳೆಯ ದಂಡೆಯನ್ನು ತಲುಪಿದಾಗ ದೋಣಿ ಇರಲಿಲ್ಲ. ದಂಡೆಯ ಮೇಲೆ ಬಹುಸಮಯದಿಂದ ಒಬ್ಬ ಯುವತಿ ದೋಣಿಗಾಗಿ ಕಾಯುತ್ತ ಕುಳಿತಿದ್ದಳು. ಅವಳ ವ್ಯಾಕುಲತೆಯನ್ನು ಕಂಡ ಅವರಲ್ಲೊಬ್ಬ ಅನುಕಂಪೆಯಿಂದ ತನ್ನ ಹೆಗಲಿನ ಮೇಲೆ ಅವಳನ್ನು ಕೂಡಿಸಿಕೊಂಡು ನದಿಯನ್ನು ದಾಟಿದ. ತನ್ನ ಕೃತಜ್ಞತೆಯನ್ನು ಸಲ್ಲಿಸಿ ಅವಳು ತನ್ನ ಮನೆಗೆ ಹೊರಟುಹೋದಳು. ಭಿಕ್ಷುಗಳಿಬ್ಬರೂ ತಮ್ಮ ಪ್ರಯಾಣವನ್ನು ಮುಂದುವರಿಸಿದರು. ಸ್ವಲ್ಪ ದೂರ ಹೋದಮೇಲೆ ಇನ್ನೊಬ್ಬ ಹೇಳಿದ: ''ನೀನು ಆ ಯುವತಿಯನ್ನು ಹೆಗಲ ಮೇಲೆ ಕೂರಿಸಿಕೊಂಡು ಹೊಳೆಯನ್ನು ದಾಟಿದ್ದು ತಪ್ಪು. ನಾವು ಭಿಕ್ಷುಗಳು ಹೆಂಗಸರಿಂದ ದೂರವಿರುವುದು ಒಳ್ಳೆಯದು.'' ಅದಕ್ಕೆ ಇನ್ನೊಬ್ಬ ಭಿಕ್ಷು ಉತ್ತರಿಸಿದ: ''ನಾನು ಅವಳನ್ನು ಅಲ್ಪ ಸಮಯದವರೆಗೆ ಹೊತ್ತುಕೊಂಡು ಬಂದೆ. ಆ ಭಾರವನ್ನು ಅಲ್ಲಿಯೇ ಬಿಟ್ಟೆ. ನೀನು

ಇನ್ನೂ ಅವಳನ್ನು ಹೊತ್ತುಕೊಂಡೇ ಬರುತ್ತಿರುವೆ. ಆ ಭಾರವನ್ನು ಮೊದಲು ಇಳಿಸು.''

ಪ್ರತಿಯೊಬ್ಬರೂ ಹಗಲಿರುಳು ಈ ಪ್ರಪಂಚದ ಭಾರವನ್ನು ಹೊತ್ತುಕೊಂಡೇ ತತ್ತರಿಸುತ್ತಿದ್ದಾರೆ. ಮನಸ್ಸು ಮತ್ತು ಶರೀರ ಚಿಂತೆ, ವ್ಯಾಕುಲತೆ, ಒತ್ತಡ, ಕಳವಳಗಳ ಹೊರೆಯಿಂದ ಬಳಲಿ ವಿಶ್ರಾಂತಿಯನ್ನು ಬಯಸುತ್ತಿವೆ. ಈ ಸಹಿಸಲಾರದ ಹೊರೆಯನ್ನು ಇಳಿಸುವ ಆವಶ್ಯಕತೆ ಎಲ್ಲರಿಗೂ ಇದೆ. ಶರೀರ ಮತ್ತು ಮನಸ್ಸು – ಈ ಉಪಕರಣಗಳು ಹೊಸ ಉತ್ಸಾಹದಿಂದ, ಲವಲವಿಕೆಯಿಂದ ಕೆಲಸ ಮಾಡಬೇಕಾದರೆ ಪ್ರತಿದಿನ ಅವುಗಳಿಗೆ ವಿಶ್ರಾಂತಿಯನ್ನು ಕೊಡಲೇಬೇಕು. ದೇಹ ಅತಿ ಪರಿಶ್ರಮದಿಂದ ನಿತ್ರಾಣಗೊಂಡು ಕೆಲಸ ಮಾಡುವುದನ್ನು ನಿಲ್ಲಿಸುತ್ತದೆ. ಆದರೆ ಮನಸ್ಸಿನ ಅವಸ್ಥೆಯೇ ಬೇರೆ. ಬೆಳಗಿನಿಂದ ರಾತ್ರಿಯವರೆಗೆ ನಿರಂತರವಾಗಿ ಯೋಚಿಸುವುದನ್ನು ಅದು ನಿಲ್ಲಿಸುವುದೇ ಇಲ್ಲ. ಕೆಲವರಿಗೆ ರಾತ್ರಿಯೂ ನಿದ್ರೆಯ ಸುಖವು ಸಿಗುವುದಿಲ್ಲ. ಈ ರೀತಿ ಬಿಡುವಿಲ್ಲದೆ ದುಡಿಯುತ್ತಿರುವ ಮನಸ್ಸು ಶಕ್ತಿಹೀನವಾಗಿ ಕುಸಿಯುತ್ತದೆ.

ಅನೇಕ ಮನೋವಿಕಾರಗಳಿಗೆ ಇದೇ ಕಾರಣ. ಆದುದರಿಂದ ವೈದ್ಯರ ಸಲಹೆಯೆಂದರೆ ಸ್ವಲ್ಪಕಾಲ ಎಲ್ಲವನ್ನೂ ನಿಲ್ಲಿಸಿ, ಸುಮ್ಮನಿರಬೇಕು. ಸುಮ್ಮನಿರುವುದೆಂದರೆ ಸೋಮಾರಿತನವಲ್ಲ; ಮನಸ್ಸು ಬಾಹ್ಯ ಜಗತ್ತಿನ ವಿಷಯವನ್ನು ಎಡಬಿಡದೆ ಚಿಂತಿಸುವುದನ್ನು ನಿಲ್ಲಿಸುವುದು. ಯಾಂತ್ರಿಕವಾಗಿ ಸಾವಿರಾರು ನಿರರ್ಥಕ ಯೋಚನೆಗಳಿಂದ ಕುದಿಯುತ್ತಿರುವ ಮನಸ್ಸನ್ನು ಉಪಶಮನಗೊಳಿಸುವುದು ಹೇಗೆ?

**೧) ದೇವರ ನಾಮಸ್ಮರಣೆ :** ಯಾರು ಆಸ್ತಿಕರೋ ಮತ್ತು ಯಾರಿಗೆ ತಮಗೆ ಇಷ್ಟವಾದ ಭಗವಂತನ ರೂಪದಲ್ಲಿ ಭಕ್ತಿ, ವಿಶ್ವಾಸಗಳಿವೆಯೋ ಅಂಥವರು ದೇವರ ನಾಮವನ್ನು ಜಪಿಸುವುದರಿಂದ ವಿಕ್ಷಿಪ್ತವಾದ ಚಿತ್ತವನ್ನು ಸ್ತಿಮಿತಕ್ಕೆ ತರಬಲ್ಲರು. ದೇವರ ನಾಮವನ್ನು ಜಪಿಸುತ್ತಿದ್ದರೆ ಮನಸ್ಸನ್ನು ಪ್ರಕ್ಷುಬ್ಧಗೊಳಿಸುತ್ತಿರುವ ಸಾವಿರಾರು ಅಪ್ರಯೋಜಕ ಶಬ್ದಗಳನ್ನು ತಡೆಯಬಹುದು. ಅದೇ ರೀತಿಯಾಗಿ ಇಷ್ಟದೇವತೆಯ ಸುಂದರ ಮತ್ತು ಪವಿತ್ರ ಮೂರ್ತಿ, ನಿರಂತರವಾಗಿ ಮನಃಪಟಲದ ಮೇಲೆ ಕಾಣಿಸಿಕೊಳ್ಳುತ್ತಿರುವ ಹೊರಗಿನ ವಸ್ತುಗಳ ಬಿಂಬಗಳನ್ನು ನಿಲ್ಲಿಸುವುದು. ಎಲ್ಲಿಯವರೆಗೆ ದೇವರ ರೂಪ ಮತ್ತು ನಾಮಗಳಿರುವವೋ ಅಲ್ಲಿಯವರೆಗೆ ಜ್ಞಾತ ವಸ್ತುಗಳ ನಾಮ-ರೂಪಗಳು ಚಿತ್ತವನ್ನು ಕಲಕುವುದಿಲ್ಲ. ಜಗತ್ತಿನ ಸಾರವೇ ನಾಮ ಮತ್ತು ರೂಪ. ಅವುಗಳನ್ನು ಸ್ವಲ್ಪ ಸಮಯವಾದರೂ ತ್ಯಜಿಸಿ ಭಗವಂತನ ನಾಮ-ರೂಪಗಳ ಮೇಲೆ ನಿಲ್ಲುವಂತೆ ಪ್ರಯತ್ನಿಸಬೇಕು. ನಾಮಜಪಕ್ಕೆ ನಮ್ಮನ್ನು ಹಿಡಿದಿರುವ ಸಂಮೋಹಿನಿಯಿಂದ ಬಿಡುಗಡೆಗೊಳಿಸುವ ಶಕ್ತಿಯಿದೆ. ಆದುದರಿಂದಲೇ ದೇವರನ್ನು ಭವರೋಗ ವೈದ್ಯನೆಂದು ಶಾಸ್ತ್ರಗಳು ಸಂಬೋಧಿಸಿರುವುದು. ಈ ಭವಬೇಗೆಯಿಂದ ಅಲ್ಪ ಸಮಯಕ್ಕಾದರೂ ಮುಕ್ತರಾಗಲು ಇರುವ ಔಷಧವಿದು. ಇದು ಎಲ್ಲರಿಗೂ ಎಟಕುವಂಥ ಉಪಾಯ. ದೇವರು ಬೇಕಾಗಿಲ್ಲದಿದ್ದರೂ ಚಿತ್ತಶಾಂತಿಗಾಗಿ ನಾಮಸ್ಮರಣೆಯ ಆವಶ್ಯಕತೆಯಿದೆ. ಬಹಿರ್ಮುಖಿಯಾದ ಮನಸ್ಸನ್ನು ಅಂತರ್ಮುಖಿಯನ್ನಾಗಿ ಮಾಡುವ ಸಾಮರ್ಥ್ಯ ಜಪಕ್ಕಿದೆ.

**೨) ಓಂಕಾರ ಸ್ಮರಣೆ :** ಭಗವಂತನ ರೂಪದಲ್ಲಿ ಯಾರಿಗೆ ಆಸಕ್ತಿಯಿಲ್ಲವೋ ಅಂಥವರು ಓಂಕಾರದ ಜಪಮಾಡಬಹುದು. **ಓಂ** ಶಬ್ದ ನಿರಾಕಾರನಾದ ಭಗವಂತನ ಶಾಶ್ವತವಾದ ಹೆಸರು. ಪತಂಜಲಿ ತನ್ನ ಯೋಗಶಾಸ್ತ್ರದಲ್ಲಿ '**ತಸ್ಯ ವಾಚಕಃ ಪ್ರಣವಃ**' – 'ಈಶ್ವರನ ಹೆಸರು ಓಂಕಾರ'ವೆಂದು ಹೇಳಿದ್ದಾನೆ. ಓಂ ಮಂತ್ರ ಆದಿ ಶಬ್ದ. ಈ ಅನಾಹತ ಶಬ್ದದಿಂದಲೇ ಸೃಷ್ಟಿಯು ಪ್ರಾರಂಭವಾಯಿತೆಂದು ಹಿಂದೂಧರ್ಮ ಹೇಳುತ್ತದೆ. ಜಗತ್ತಿನ ಎಲ್ಲ ಭಾಷೆಗಳು, ಶಬ್ದಗಳು ಹುಟ್ಟಿರುವುದು ಓಂಕಾರದಿಂದಲೇ. ಆದುದರಿಂದ ಅದು ಹಿಂದುಗಳಿಗೆ ಮಾತ್ರವಲ್ಲದೆ ಬೌದ್ಧ, ಜೈನ ಮತ್ತು ಸಿಕ್ಖ್ ಧರ್ಮಗಳ ಅನುಯಾಯಿಗಳಿಗೂ ಪವಿತ್ರ ಮಂತ್ರ. ಕೆಲವರಿಗೆ ಯಾವ ವಿಶಿಷ್ಟ ಧರ್ಮವನ್ನು, ಮತವನ್ನು ಅನುಸರಿಸುವ ಇಚ್ಛೆ ಇರುವುದಿಲ್ಲ. ಅದರಲ್ಲಿ ತಪ್ಪೇನಿಲ್ಲ. ಅಂತಹ ಮನೋವೃತ್ತಿಯುಳ್ಳವರು '**ಓಂ**' ಸ್ಮರಣೆಯಿಂದ ಶಾಂತಿಯನ್ನು ಪಡೆಯಬಹುದು. ಪಾಶ್ಚಿಮಾತ್ಯ ದೇಶಗಳಲ್ಲಿ **ಓಂ** ಮಂತ್ರ ಇದೇ ಕಾರಣಕ್ಕಾಗಿ ಜನಪ್ರಿಯವಾಗುತ್ತಿದೆ. ೨೦೦೩ ಆಗಸ್ಟ್ ೪ರ ಟೈಮ್ ಪತ್ರಿಕೆಯ ವರದಿಯ ಪ್ರಕಾರ ಅಮೆರಿಕೆಯಲ್ಲಿ ೧೦ ಮಿಲಿಯನ್ ಜನರು ಓಂಕಾರದ ಮೇಲೆ ಧ್ಯಾನ ಮಾಡುತ್ತಾರೆ. **ಓಂ** ಎಂಬುದು ಸಂಸ್ಕೃತ ಶಬ್ದವಾದರೂ ಅದನ್ನು ಜಪಿಸುವವರು ಹಿಂದುಗಳೇ ಆಗಿರಬೇಕೆಂಬ ನಿಯಮವಿಲ್ಲ.

**೩) ನನ್ನ ಅಸ್ತಿತ್ವ ಅಥವಾ ನಾನಿದ್ದೇನೆ :** ನಾನು ಇದ್ದೇನೆ ಎಂಬ ಪ್ರತ್ಯಕ್ಷ ಅನುಭವಕ್ಕೆ ಯಾವ ಪ್ರಮಾಣವೂ ಬೇಕಾಗಿಲ್ಲ, ಯಾರ ಸಾಕ್ಷ್ಯಾಧಾರದ ಆವಶ್ಯಕತೆಯಿಲ್ಲ. ನಾನು ಬದುಕಿದ್ದೇನೆ ಎಂಬ ಅರಿವು ಎಲ್ಲ ಜೀವಿಗಳಿಗೂ ಸಾಮಾನ್ಯವಾದುದು. ಆನೆಯಿಂದ ಇರುವೆಯವರೆಗೆ ತಮ್ಮ ಇರುವಿಕೆಯ ಜ್ಞಾನವಿದೆ. ಈ ಅನುಭವವೇ ಎಲ್ಲದಕ್ಕೂ ಮೂಲಾಧಾರ ಮತ್ತು ಇದನ್ನು ಅವಲಂಬಿಸಿಯೇ ನಮ್ಮ ಎಲ್ಲ ಯೋಚನೆಗಳು, ಭಾವನೆಗಳು ಸುಖದುಃಖಗಳು ನಿರ್ಭರವಾಗಿವೆ. ನಾನು ಬಡವ, ನಾನು ಶ್ರೀಮಂತ, ನಾನು ದುಃಖದಲ್ಲಿದ್ದೇನೆ, ಅಥವಾ ಸುಖದಲ್ಲಿದ್ದೇನೆ. ನಾನು ಇಂತಹ ವ್ಯಕ್ತಿ, ಅಥವಾ ಅಂತಹ ವ್ಯಕ್ತಿ ಎಂಬ ಇತ್ಯಾದಿ ಭಾವನೆಗಳು ವ್ಯಕ್ತಿಯ ಅಸ್ತಿತ್ವದ ಮೇಲೆ ನಿಂತಿವೆ. ಈ ಉಪಾಧಿಗಳು ಇರದಿದ್ದರೂ ವ್ಯಕ್ತಿಯ ಅಸ್ತಿತ್ವ ಇದ್ದೇ ಇರುತ್ತದೆ. ಈ ವಿಶೇಷಣಗಳು ಬರುತ್ತವೆ ಮತ್ತು ಹೋಗುತ್ತವೆ. ವ್ಯಕ್ತಿ ಈ ವಿಶೇಷಣಗಳಿಂದ ಇದನ್ನು ವರ್ಣಿಸಿದಾಗ ಮಾತ್ರ, ಅಂದರೆ ನಾನು ಅದು ಅಥವಾ ಇದು ಎಂದು ಹೇಳಿಕೊಂಡಾಗ ಮಾತ್ರ ಅವನ ಇರುವಿಕೆ ಆ ನಿಲುವನ್ನು ಪ್ರತಿಫಲಿಸುತ್ತದೆ. ಗೋಸುಂಬೆ ಸಂದರ್ಭಾನುಸಾರ ತನ್ನ ಬಣ್ಣ ಬದಲಾಯಿಸಿಕೊಳ್ಳುವಂತೆ ಇದು. ಪಟ್ಟಕಕ್ಕೆ (prism) ಯಾವ ಬಣ್ಣವೂ ಇಲ್ಲ. ಆದರೆ ಯಾವ ಬಣ್ಣ ಅದರ ಎದುರಿಗೆ ಬರುವುದೋ ಆ ಬಣ್ಣವನ್ನೇ ಪ್ರತಿಬಿಂಬಿಸುತ್ತದೆ. ಈ ಯಾವ ವಿಶೇಷಣಗಳ ವರ್ಣಗಳಲ್ಲದೆ ಇರುವಿಕೆಯ ಜ್ಞಾನ ಇರಬಲ್ಲದು,

ಅದಕ್ಕೆ ಯಾವ ಆಶ್ರಯವೂ ಬೇಕಾಗಿಲ್ಲ. ಆದುದರಿಂದ ಶ್ರೀಮಂತಿಕೆಯಲ್ಲಾಗಲಿ ಅಥವಾ ಬಡತನದಲ್ಲಾಗಲಿ, ಶೋಕದಲ್ಲಾಗಲಿ ಅಥವಾ ಸಂತೋಷದಲ್ಲಾಗಲಿ ಸತತವಾಗಿ 'ನಾನಿರುವೆ, ನಾನು ಇದ್ದೇನೆ' ಎಂದು ಸ್ಪಂದಿಸುತ್ತಿರುವ ಪ್ರಜ್ಞೆಯ ಮೇಲೆ ಮನಸ್ಸನ್ನು ಹಿಡಿದು ನಿಲ್ಲಿಸಬೇಕು. ಪ್ರಾರಂಭದಲ್ಲಿ ಮನಸ್ಸು ಇದನ್ನು ವಿರೋಧಿಸಬಹುದು. ಆದರೆ ತಾಳ್ಮೆ, ದೃಢತೆಗಳಿಂದ ಪುನಃ ಪುನಃ ಅದನ್ನು ಗುರಿಯ ಮೇಲೆ ನಿಲ್ಲಿಸಬೇಕು.

ಸ್ವಾಮಿ ವಿವೇಕಾನಂದರ ಶಬ್ದಗಳಲ್ಲಿ: ''ಯಾವುದು ನಮ್ಮದೋ ಅದನ್ನು ನಾವು ಎಂದಿಗೂ ಕಳೆದುಕೊಳ್ಳುವುದಿಲ್ಲ. ಯಾರು ತಮ್ಮ ವ್ಯಕ್ತಿತ್ವವನ್ನು (being) ಕಳೆದುಕೊಳ್ಳಲಿಚ್ಛಿಸುವರು? ತಮ್ಮ ಜೀವನವನ್ನು (existence) ಕಳೆದುಕೊಳ್ಳಲಿಚ್ಛಿಸುವರು? ನಾನು ಒಳ್ಳೆಯವನಾಗಿದ್ದರೆ, ಮೊದಲು ನನ್ನ ಅಸ್ತಿತ್ವ, ಅನಂತರ ಅದು ಒಳ್ಳೆಯ ಗುಣದ ಬಣ್ಣವನ್ನು ಪಡೆಯುವುದು. ನಾನು ಕೆಟ್ಟವನಾಗಿದ್ದರೆ, ಮೊದಲು ಅಸ್ತಿತ್ವ, ಅನಂತರ ಕೆಟ್ಟ ಗುಣದ ಬಣ್ಣವನ್ನು ಪಡೆಯುವುದು. ಮೊದಲು ಇರವು, ಕೊನೆಗೆ ಇರವು, ಯಾವಾಗಲೂ ಇರವು. ಅದೆಂದಿಗೂ ನಾಶವಾಗುವುದಿಲ್ಲ, ಅದು ಯಾವಾಗಲೂ ಇರುವುದು.'' *(ಕೃತಿಶ್ರೇಣಿ, ಸಂ. ೬, ಪುಟ ೨೮೨)*

೪) **ಉಸಿರಾಟ :** ಸದಾ ನಡೆಯುತ್ತಿರುವ ಉಸಿರಾಟದ ಮೇಲೆ ಮನಸ್ಸನ್ನು ಕೇಂದ್ರೀಕರಿಸಬಹುದು. ಶ್ವಾಸ-ಪ್ರಶ್ವಾಸ ಅನೈಚ್ಛಿಕ ಕ್ರಿಯೆ. ಅದನ್ನು ಎಚ್ಚರಿಕೆಯಿಂದ ವೀಕ್ಷಿಸುವುದರಿಂದ ಮನಸ್ಸಿನ ಹೊಯ್ದಾಟ, ತಳಮಳ, ಚಂಚಲತೆಗಳು ಕ್ರಮಶಃ ಕಡಿಮೆಯಾಗಿ, ಅದು ಶಾಂತವಾಗುವುದು. ಉಸಿರಾಟದ ಗತಿಗೂ ಮತ್ತು ಮನಸ್ಸಿಗೂ ಪರಸ್ಪರ ಸಂಬಂಧವಿದೆ. ಮನಸ್ಸಿನಲ್ಲಿ ಏಳುವ ವಿವಿಧ ಭಾವಗಳು ಉಸಿರಾಟದ ಮೇಲೆ ಪ್ರಭಾವವನ್ನು ಬೀರುತ್ತವೆ. ಅದರಂತೆಯೇ ಉಸಿರಾಟದಲ್ಲಾಗುವ ವ್ಯತ್ಯಾಸವು ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. ಒಂದನ್ನು ನಿಯಂತ್ರಿಸಿದರೆ ಇನ್ನೊಂದನ್ನು ಹತೋಟಿಗೆ ತರಬಹುದು. ಮನಸ್ಸನ್ನು ನಿರೋಧಿಸುವುದು ಕಷ್ಟ; ಆದರೆ ಉಸಿರಾಟದ ಗತಿಯನ್ನು ನಾವು ಬದಲಿಸಬಹುದು. ಯೋಗದಲ್ಲಿ ಪ್ರಾಣಾಯಾಮಕ್ಕೆ ಮಹತ್ವದ ಸ್ಥಾನವನ್ನು ಇದೇ ಕಾರಣಕ್ಕಾಗಿ ಕೊಟ್ಟಿದ್ದಾರೆ.

ಎಲ್ಲ ಸಾಧನೆಗಳ ಏಕಮಾತ್ರ ಉದ್ದೇಶ: ಹೊರಗಡೆಗೆ ಅಲೆದಾಡುತ್ತಿರುವ ಮನವನ್ನು ಎಳೆದು ಒಳಗೆ ತರುವುದು. ಅಂತಹ ಮನಸ್ಸಿಗೆ ಮಾತ್ರ ಶಾಂತಿ, ಆನಂದಗಳ ಅನುಭವ ಸಾಧ್ಯ.

# ಚೈತನ್ಯದೇವನ ಭಕ್ತಿಮಾರ್ಗ

ಆಂಗ್ಲಮೂಲ : **ಸ್ವಾಮಿ ಅಶೋಕಾನಂದ**

ಅನುವಾದ : **ಡಾ. ಇ. ವಸಂತಕುಮಾರ್**



**ಭಾಗ ೨**

**ಪ್ರ**ತಿಮಾಪೂಜೆ ಎಂದರೆ ದೇವರನ್ನು ಒಂದು ವಿಗ್ರಹದಲ್ಲಿ ಪೂಜಿಸುವುದು. ಕ್ರಿಸ್ತನ ಒಂದು ವರ್ಣಚಿತ್ರ ಅಥವಾ ವಿಗ್ರಹವಿದೆ, ಮತ್ತು ನೀವು ಅದನ್ನು ಪೂಜಿಸುತ್ತೀರಿ ಎಂದಿಟ್ಟುಕೊಳ್ಳಿ. ಅದೂ ಕೂಡ ಸರಿಯಾದ ಒಂದು ಸಾಧನೆಯೇ. ಆದರೆ ನೀವು ಆ ವಿಗ್ರಹವನ್ನು ಜಡವಾದ ಕಲ್ಲು ಅಥವಾ ಕಾಗದ ಮತ್ತು ಬಣ್ಣ ಎಂದು ಭಾವಿಸಬಾರದು. ನೀವು ಹಾಗೆ ಯೋಚಿಸಬಾರದು. ಅದು ಕೇವಲ ಒಂದು ವರ್ಣಚಿತ್ರವಾಗಿದ್ದರೂ, ನೀವು ಅದನ್ನು ಚಿತ್ರವೆಂದು ಯೋಚಿಸಬಾರದು. ಕ್ರಿಸ್ತನ ನೋಟವೆಂದೇ ಭಾವಿಸಬೇಕು. ಕ್ರಿಸ್ತ ಇಲ್ಲಿರುವನು ಎಂದೇ ತಿಳಿಯಬೇಕು! ಸಾಮಾನ್ಯ ಸಂಭಾಷಣೆಯಲ್ಲಿ, 'ಇವರು ಈ ಸಂಸ್ಥೆಯ ಸ್ಥಾಪಕರು' ಎಂದು ಹೇಳುತ್ತೇವಲ್ಲ, ಹಾಗೆ. ಅಲ್ಲಿರುವುದು ಅವರ ತೈಲಚಿತ್ರ ಅಥವಾ ಭಾವಚಿತ್ರವಾಗಿರಬಹುದು. ಆದರೆ ನಾವು, 'ಸ್ಥಾಪಕರ ಚಿತ್ರ ಇಲ್ಲಿದೆ' ಎಂದು ಹೇಳುವುದಿಲ್ಲ. ಹಾಗೆಂದೇ ತಾನಾಗಿ ತಿಳಿದು ಬರುವುದು ಎಂದು ನೀವು ಯೋಚಿಸಬಹುದು. ಇಲ್ಲ, ಯಾವಾಗಲೂ ಹಾಗೆ ತಿಳಿದುಕೊಂಡಿರುವುದಿಲ್ಲ. ಒಂದು ವಸ್ತುವಿನ ಪ್ರತೀಕ ಬೇಗನೆ ನಮ್ಮ ಮನಸ್ಸಿನಲ್ಲಿ ಅದೇ ಆಗಿಬಿಡುತ್ತದೆ. ಏನೇ ಆಗಲಿ, ವಿವಿಧ ಪಂಥಗಳು ಮತ್ತು ಧರ್ಮಗಳು ನಿಯೋಜಿಸಿರುವ ಭಕ್ತಿಯ ಮಾರ್ಗಗಳಲ್ಲಿ ಪೂಜಿಸಲ್ಪಡುವ ವಸ್ತುವೊಂದು ಇದ್ದೇ ಇರುತ್ತದೆ. ಅದೊಂದು ಶಿಲುಬೆ, ಅಥವಾ ಕ್ರಿಸ್ತನನ್ನು ಏರಿಸಿದ ಶಿಲುಬೆ, ಅಥವಾ ಮಗುವನ್ನು ಎತ್ತಿಕೊಂಡಿರುವ ಮೆಡೋನಾ ಅಥವಾ ಭಗವಾನ್ ಬುದ್ಧ, ಅಥವಾ ಒಬ್ಬ ಜಿನ ಅಥವಾ ಹಿಂದೂ ಪ್ರತೀಕ ಅಥವಾ ಪ್ರತಿಮೆ ಆಗಿರಬಹುದು. ಭಕ್ತಿಯ ಸಾಧನೆ ಎಲ್ಲೆಲ್ಲಿ ಇರುವುದೋ ಅಲ್ಲೆಲ್ಲಾ ಈ ರೀತಿಯ ಅಭ್ಯಾಸ ಇರುವುದು.

ಆದುದರಿಂದ ನೀವು ಒಂದು ದೇವಸ್ಥಾನಕ್ಕೆ ಹೋಗಬಹುದು. ಆದರೆ ನೀವು ಪೂಜಿಸುವ ವಸ್ತುವನ್ನು ನಿಮ್ಮದೇ ಆದ ಒಂದು ಪೂಜೆಯ ಕೋಣೆಯಲ್ಲಿ ಇಟ್ಟುಕೊಳ್ಳಬಹುದು. ಈ ವಿಗ್ರಹದಲ್ಲಿ ನೀವು ನಿಮ್ಮ ದೇವತೆ ಇರುವುದನ್ನು ನಿಜವಾಗಿ ಅನುಭವಿಸುತ್ತೀರಿ. 'ಅದು ಕೇವಲ ನನ್ನನ್ನು ಭ್ರಮೆಗೊಳಿಸುವ ರೀತಿ. ವಿಗ್ರಹ ಕಲ್ಲು ಅಥವಾ ಲೋಹ ಅಥವಾ ಮರದಿಂದ ಮಾಡಲಾಗಿದೆ ಎಂಬುದು ನನಗೆ ಗೊತ್ತು. ಅದನ್ನು ದೇವರು ಎಂದು ತಿಳಿಯಲು ಹೇಗೆ ಸಾಧ್ಯ?' ಎಂದು ನೀವು ಹೇಳಬಹುದು. ಸರಿ, ನೀವು ನಿಮ್ಮ ವಿಶೇಷ ಬುದ್ಧಿಶಕ್ತಿಯನ್ನು ಉಪಯೋಗಿಸುವುದು ಒಳ್ಳೆಯದು. ನೀವು ಅರಸುತ್ತಿರುವ, ಪ್ರೀತಿಸುತ್ತಿರುವ ಮತ್ತು ಪೂಜಿಸುತ್ತಿರುವ ದೇವರು ಎಲ್ಲೆಲ್ಲೂ ಇರುವನು ಎಂದು ನೀವು ಯಾವಾಗಲೂ ಹೇಳುತ್ತಿದ್ದಿರಲ್ಲವೆ? ಅವನು ಈ ಮರ, ಈ ಲೋಹ ಅಥವಾ ಈ ಕಲ್ಲಿನಲ್ಲಿ ಏಕೆ ಇರಬಾರದು? ಪೀಠದ ಮೇಲೆ ಪೂಜಿಸುವುದಕ್ಕೆ ಏನನ್ನಾದರೂ ನಿಲ್ಲಿಸಿದ ತಕ್ಷಣ ದೇವರು ಆ ಸ್ಥಳದಿಂದ ಮರೆಯಾದನೆಂದು ನೀವು ಯೋಚಿಸುವಿರಾ? ಅನಂತನೂ ಸರ್ವವ್ಯಾಪಿಯೂ ಆದ ಭಗವಂತ ಯಾವುದಾದರೂ ಸ್ಥಳದಿಂದ ಹೊರಟು ಹೋಗಲು ಹೇಗೆ ಸಾಧ್ಯ? ಎಲ್ಲಿ ಅವನನ್ನು ಇರಲು ಬಯಸಿದಿರೋ ಅಲ್ಲಿ ಅವನನ್ನು ಇಟ್ಟಿರುವಿರಿ ಎಂಬುದು ನಿಮಗೆ

ತಿಳಿಯುತ್ತಿಲ್ಲವೆ? ನೀವು ಅವನ ಜುಟ್ಟನ್ನು ಹಿಡಿದು ಅವನನ್ನು ಇಟ್ಟುಕೊಂಡಿರುವಿರಿ. ಅವನು ನಿಮ್ಮಿಂದ ದೂರ ಹೋಗಲಾರ.

'ಓ, ದೇವರು ಸರ್ವಶಕ್ತ, ಎಲ್ಲಾ ಶಕ್ತಿಗಳೂ ಅವನಲ್ಲಿವೆ.' ಎಂದು ನಾವು ಹೇಳುತ್ತೇವೆ. ಆದರೆ ಅವನು ನಮ್ಮ ಕೈಯಲ್ಲಿ ಅಸಹಾಯಕನಾಗಿದ್ದಾನೆ ಎಂಬುದನ್ನು ಮರೆಯುತ್ತೇವೆ. ಅವನು ನಮ್ಮಿಂದ ದೂರ ಹೊರಟುಹೋಗಲಾರ. ಅವನು ಎಂದೆಂದಿಗೂ ನಮ್ಮ ಒಳಗೆ, ಅಂತರತಮನಾಗಿ ಇದ್ದಾನೆ. ಅವನು ಸಾಂತ ಜೀವಿಯಾಗಿದ್ದಿದ್ದರೆ, ಹೊರಟುಹೋಗಬಹುದಿತ್ತು. ನಾನು ಈ ಸಭಾಂಗಣದಿಂದ ಓಡಿಹೋಗಬಹುದು, ಆದರೆ ದೇವರಿಗೆ ಹಾಗೆ ಮಾಡಲಾಗುವುದಿಲ್ಲ. ನೀವು ಅವನನ್ನು ಹಿಡಿದಿಟ್ಟುಕೊಂಡಿರುವಿರಿ. ನಿಮ್ಮ ಸ್ವಂತ ಅನುಕೂಲಕ್ಕಾಗಿ ಒಂದು ಸಣ್ಣ ದೇವರಿಡುವ ಜಾಗವನ್ನು ಮಾಡಿಕೊಳ್ಳಿ ಮತ್ತು ಹೇಳಿ, 'ದೇವರೇ ಇಲ್ಲಿ ನೀನಿರುವೆ. ನಾನು ನಿನಗೆ ಚೆನ್ನಾದ ಕೆಲವು ಹೂವುಗಳನ್ನು ಅರ್ಪಿಸುತ್ತಿರುವೆ, ದಯವಿಟ್ಟು ಅವನ್ನು ಸ್ವೀಕರಿಸು.' ಅವನಿಗೆ ಒತ್ತಾಯ ಮಾಡಿ. ಅವನು ಎಲ್ಲಿರಬೇಕೆಂದು ನಿಮ್ಮ ಇಚ್ಛೆಯೋ ಅಲ್ಲಿ ಅವನನ್ನು ಇಟ್ಟುಕೊಂಡಿದ್ದೀರಿ; ಅವನ ಮೇಲೆ ಸ್ವಲ್ಪ ಬಲಾತ್ಕಾರವನ್ನೇಕೆ ಮಾಡಬಾರದು? ಈ ರೀತಿ ಬಲಾತ್ಕರಿಸುವುದು ಅವನಿಗೆ ಇಷ್ಟವಾಗುತ್ತದೆಂದು ದೇವರನ್ನು ಅರಿತವರು ಹೇಳುತ್ತಾರೆ. ಪ್ರೀತಿಯ ಹಿಂಸೆ ಅವನಿಗೆ ಇಷ್ಟ. ನಿಮ್ಮಲ್ಲಿ ಮೃದುಹೃದಯಿಗಳಾದವರು ದೇವರೊಂದಿಗೆ ಹಾಗೆ ಒರಟಾಗಿ ವ್ಯವಹರಿಸಲು ಇಚ್ಛಿಸದಿದ್ದರೆ, ಅವನು ಅಲ್ಲಿದ್ದಾನೆ ಮತ್ತು ಅವನಿಗೆ ನೀವು ಕೆಲವು ವಸ್ತುಗಳನ್ನು ಕೊಡುತ್ತಿದ್ದೀರಿ ಎಂದಾದರೂ ತಿಳಿಯಿರಿ.

ಭಕ್ತಿ ಹೃದಯಕ್ಕೆ ಸಂಬಂಧಿಸಿದುದು, ಆದುದರಿಂದ ಅದು ಯಾವಾಗಲೂ ವೈಯಕ್ತಿಕ. ವೈಯಕ್ತಿಕ ನಡವಳಿಕೆಯಲ್ಲಿ ನಮ್ಮ ಹೃದಯ ಮತ್ತೊಬ್ಬರೆಡೆಗೆ ಹರಿದಾಗ, ಅದು ಅವರಿಗೆ ಸೇವೆ ಮಾಡಲು ಇಚ್ಛಿಸುತ್ತದೆ. ಅವರ ಸೇವೆ ಮಾಡಲು ಒಲವಿಲ್ಲದಂತೆ ನೀವು ಯಾರನ್ನಾದರೂ ಪ್ರೀತಿಸಿದ್ದೀರಾ? ಇಲ್ಲ. ಸೇವೆ ಮಾಡಲು ನೀವು ಇಚ್ಛೆಪಡದಿದ್ದರೆ, ನಿಮಗೆ ಅವನ ಮೇಲೆ ಪ್ರೀತಿ ಇರಲಿಲ್ಲ ಎಂದರ್ಥ. ನೀವು ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ತಾಯಿ, ಸುಖಭೋಗಗಳನ್ನು ಎಷ್ಟೇ ಇಚ್ಛೆಪಟ್ಟರೂ, ಮಗು ಬಂದಾಗ ಇವೆಲ್ಲವನ್ನೂ ಮರೆಯುವಳು – ಕಡೇಪಕ್ಷ ಬಹುಭಾಗವನ್ನಾದರೂ ಮರೆಯುವಳು. ಏಕೆಂದರೆ ಪ್ರೀತಿಯ ವಸ್ತು, ತನ್ನ ಹಿತವನ್ನು ಸಂಪೂರ್ಣವಾಗಿ ಕಡೆಗಣಿಸುವಷ್ಟು ಸೇವೆಗೆ ಯೋಗ್ಯವಾದ ವಸ್ತುವೂ ಹೌದು.

ನೀವು ದೇವರ ಸೇವೆಯನ್ನು ಮಾಡುವುದು ಹೇಗೆ? ಅದರ ಬಗ್ಗೆ ಪ್ರಪಂಚದಲ್ಲಿ ಸಾರ್ವತ್ರಿಕವಾಗಿ ಎಲ್ಲರೂ ಮಾಡುವಂತೆ ಹೂವನ್ನು ಅರ್ಪಿಸಲು ಇಷ್ಟಪಡುವಿರಿ. ಭಕ್ತರು ಅರ್ಪಿಸಲು ಸಾಮಾನ್ಯವಾಗಿ ಇಷ್ಟಪಡುವ ಕೆಲವು ವಸ್ತುಗಳು ಇವು ಎಂದು ತೋರುತ್ತದೆ. ಆದರೆ ನೀವು ಕಲ್ಲುಸಕ್ಕರೆಯನ್ನು ದೇವರಿಗೆ ಅರ್ಪಿಸಿದರೆ, ಅನೇಕರು ಇಷ್ಟಪಡುವುದಿಲ್ಲ. ಅದೇ ಜನರು ಅದನ್ನು ತಮ್ಮ ಸ್ನೇಹಿತರಿಗೆ ಅಥವಾ ತಾವು ಪ್ರೀತಿಸುವವರಿಗೆ ಕೊಡುವರು. ಅದು ಬಹಳ ಸರಿಯಾದುದು ಎಂದು ಅವರು ತಿಳಿಯುವರು. 'ನಮ್ಮ ಸ್ನೇಹಿತ ಅದನ್ನು ಇಷ್ಟಪಡುತ್ತಾನೆ ಎಂದು ನನಗೆ ಗೊತ್ತು' ಎಂದು ಅವರು ಹೇಳುತ್ತಾರೆ. ದೇವರು ಕಲ್ಲುಸಕ್ಕರೆಯನ್ನು ತಿನ್ನಲು ಇಷ್ಟಪಡುವುದಿಲ್ಲ ಎಂದು ನಿಮಗೆ ಹೇಗೆ ಗೊತ್ತು? ಅವರು ಪಶ್ಚಿಮ ದೇಶದವರಾದ ಕಾರಣ, ಪಾಶ್ಚಿಮಾತ್ಯರಿಗೆ ಯಾವುದು ಅಭ್ಯಾಸವಾಗಿದೆಯೋ ಅದನ್ನು ಮಾತ್ರ ಹೇಳಬೇಕೆಂದು ಕೆಲವರು ತಿಳಿಯುತ್ತಾರೆ. ಒಟ್ಟಿನಲ್ಲಿ, ಆ ಆಲೋಚನೆಯನ್ನು ನಾನು ಇಷ್ಟಪಡುತ್ತೇನೆ ಮತ್ತು ಅನುಸರಿಸಲು ಯತ್ನಿಸುತ್ತೇನೆ. ಆದರೆ ಪಶ್ಚಿಮದೇಶ ಪೌರ್ವಾತ್ಯರಿಂದ ಕೆಲವು ಸಣ್ಣ, ಹೊಸ ವಿಷಯಗಳನ್ನು ಕಲಿಯಬಹುದೆಂದೂ ನನಗೆ ಅನ್ನಿಸುತ್ತದೆ.

ನಿಮ್ಮ ಹೃದಯದಲ್ಲಿ ಆಸೀನನಾದ ಭಗವಂತ ನೀವು ಸಂತೋಷ ಪಡುವುದರಲ್ಲೆಲ್ಲಾ ಸಂತೋಷಪಡುವನು ಎಂದು ನಮ್ಮ ಆಚಾರ್ಯರೆಲ್ಲರೂ ಒಂದೇ ಸಮನೆ ಹೇಳುತ್ತಾರೆ. ನೀವು ಸುಂದರವಾದ ಸಂಗೀತವನ್ನು ಕೇಳಿದಿರೆಂದು ಇಟ್ಟುಕೊಳ್ಳಿ. ಅದು ನಿಮ್ಮ ಕಿವಿಗಳ ಮೂಲಕ ನಿಮ್ಮ ಮೆದುಳಿಗೆ ತಲುಪಿದೆ. ಆದರೆ ನಿಜವಾಗಿ ಅದು ಅಲ್ಲಿಗೆ ನಿಲ್ಲುವುದಿಲ್ಲ; ಅದು ಇನ್ನೂ ಮುಂದೆ ಒಳಕ್ಕೆ, ಇನ್ನೂ ಒಳಗಡೆ, ದೇವರು ಇರುವ, ನಿಮ್ಮ ಚೈತನ್ಯದ ಕೇಂದ್ರವನ್ನೇ ತಲುಪುತ್ತದೆ, ಅಲ್ಲಿ ಸಂಗೀತ ಪ್ರಸ್ತುತಪಡಿಸಲ್ಪಡುತ್ತದೆ. ನೀವು ಸ್ವಲ್ಪ ಕಲ್ಲುಸಕ್ಕರೆಯನ್ನು ತಿಂದು ಸಂತೋಷಪಟ್ಟಾಗ ಆ ಸಂತೋಷ ನಿಮ್ಮ ಬಾಯಿ ಅಥವಾ ನಾಲಿಗೆಯಲ್ಲೇ ನಿಂತಿಲ್ಲ. ಅದು ಅಲ್ಲಿಂದ ಮುಂದಕ್ಕೆ ಹೋಗಿದೆ. ಅದು ಬುದ್ಧಿಗೆ ಹೋಗಿದೆ, ನಂತರ ಬುದ್ಧಿಯ ಮೂಲಕ ಅದು ಹೃದಯಾಸನದಲ್ಲಿರುವ ಭಗವಂತನಿಗೆ ತಲುಪಿದೆ. ಆದುದರಿಂದ ಯಾವುದನ್ನೆಲ್ಲ ನಾವು ಸಂತೋಷದಿಂದ ಅನುಭವಿಸುತ್ತೇವೆ ಎಂದು ತಿಳಿಯುತ್ತೇವೋ ಅದನ್ನೆಲ್ಲಾ ದೇವರಿಗೆ ಅರ್ಪಿಸಬಹುದು.

ಈಗ, ನೀವು ಕಲ್ಲುಸಕ್ಕರೆಯನ್ನು ಅರ್ಪಿಸಬೇಕೆಂದು ನಾನು ಒತ್ತಾಯ ಮಾಡುವುದಿಲ್ಲ, ಒಂದು ನಿದರ್ಶನವನ್ನು ಕೊಡುತ್ತಿದ್ದೇನೆ, ಅಷ್ಟೆ. ನೀವು ಏನನ್ನು ಇಷ್ಟಪಡುತ್ತೀರೋ ಅದನ್ನು ದೇವರಿಗೆ ಅರ್ಪಿಸಿ. ನೀವು ಹೂವನ್ನು ಇಷ್ಟಪಡುತ್ತೀರಾ? ನೀವು ಗಂಧದ ಕಡ್ಡಿಯ ಪರಿಮಳವನ್ನು ಇಷ್ಟಪಡುತ್ತೀರಾ? ಅವನ್ನು ಅರ್ಪಿಸಿ. ಜ್ಯೋತಿ? ಅದನ್ನು ಅರ್ಪಿಸಿ. ಯಾವುದನ್ನು ಇಷ್ಟಪಡುತ್ತೀರೋ ಅದನ್ನು ಅರ್ಪಿಸಿ. ನೀವು ನಿಮ್ಮನ್ನೇ ಅರ್ಪಿಸಿಕೊಳ್ಳಿ. ನಿಮ್ಮ ಹೃದಯವನ್ನು ಅರ್ಪಿಸಿ, ನಿಮ್ಮ ಪ್ರೀತಿಯನ್ನು ಅರ್ಪಿಸಿ. ನಿಮ್ಮಲ್ಲಿ ಸಾಕಷ್ಟು ಪ್ರೀತಿ, ಅಥವಾ ಪರಿಶುದ್ಧವಾದ ಪ್ರೀತಿ ಇಲ್ಲವೆಂದು ವಿಷಾದಿಸುತ್ತೀರಿ. ಅದು ನಿಮಗೆ ಬರುವಂತೆ ಅವನನ್ನು ಪ್ರಾರ್ಥಿಸಿ, ಮತ್ತು ಅದನ್ನು ಅರ್ಪಿಸಿ. ಈ ಬಗೆಯ ಉಪಾಸನೆಯನ್ನು ಒಮ್ಮೆ ನೀವು ಕಲಿತರೆ, ಅದು ಬಹಳ ಸಂತೋಷದಾಯಕವಾಗಿರುತ್ತದೆ.

ಪ್ರತಿಯೊಂದನ್ನೂ ನಾವು ಕಲಿಯಬೇಕಾಗುತ್ತದೆ. 'ಆಗ ಅದು ಅಭ್ಯಾಸದಿಂದ ಪಡೆದುಕೊಂಡ ಅಭಿರುಚಿಯಾಗುವುದು' ಎಂದು ನೀವು ಹೇಳಬಹುದು. ನೀವು ಒಂದು ಹೊಸ ಸಂಗತಿಯನ್ನು

ಕಲಿತಾಗಲೆಲ್ಲ ಅದು ಮೊದಲು ಕೃತಕವಾಗಿ ತೋರುವುದು. ಆದರೆ ಅದು ವಾಸ್ತವವಾಗಿ ನಿಮ್ಮ ಉತ್ತಮ ಪ್ರಕೃತಿಯಿಂದ ಹೊರಟಿದೆ. ಒಮ್ಮೆ ನೀವು ಅದರಲ್ಲಿ ಸ್ಥಿತರಾದ ಮೇಲೆ, ಅದು ಹಿಂದಿನ ಅಭ್ಯಾಸಕ್ಕಿಂತ ಹೆಚ್ಚು ಸ್ವಾಭಾವಿಕವಾಗುತ್ತದೆ.

ಅದನ್ನು ಹೇರುವ ಅಗತ್ಯವಿಲ್ಲ; ಅದಕ್ಕೆ ಅಡ್ಡಿಯುಂಟು ಮಾಡುವುದೂ ಬೇಡ. ಅದರ ಬಗ್ಗೆ ಅನಾವಶ್ಯಕವಾದ ವಿರೋಧ ಭಾವನೆ ಇಲ್ಲದಿರಲಿ. ಅದು ದಿನದ ಹಲವು ಘಂಟೆಗಳನ್ನು ತೆಗೆದು ಕೊಳ್ಳಬಹುದು; ಅದು ನಿಮ್ಮ ಸ್ವಭಾವಕ್ಕೆ ತಕ್ಕಂತೆ ಇದ್ದರೆ, ಅದರಿಂದ ನಿಮಗೆ ಅಪಾರ ಪ್ರಯೋಜನವಾಗುವುದು. ಆದರೆ ನೀವು ಏನನ್ನು ಮಾಡಲು ಸಾಧ್ಯವೊ ಅದನ್ನು ಆರಿಸಿಕೊಳ್ಳಿ. ಅದೇ **ಕೃಷ್ಣ ಸೇವೆ**.

ನಂತರ ಬರುವುದು **ಭಾಗವತ ಶ್ರವಣ**. ಭಾಗವತ ಎಂದರೆ, ಧರ್ಮಗ್ರಂಥಗಳನ್ನು ಅಧ್ಯಯನ ಮಾಡುವುದು. ಧರ್ಮಗ್ರಂಥ ಗಳು ಎಂದರೆ, ಬೈಬಲ್, ಕೊರಾನ್, ವೇದಗಳು, ಭಗವದ್ಗೀತೆ ಗಳಂತಹ ವಿವಿಧ ಧರ್ಮಗಳ ಪವಿತ್ರಗ್ರಂಥಗಳು ಮಾತ್ರವಲ್ಲ, ತಾತ್ತ್ವಿಕ ಸಾಹಿತ್ಯ ಮತ್ತು ಸಂತರ, ಋಷಿಗಳ ಜೀವನವೂ ಸೇರಿವೆ. ಅಂತಹ ಅಧ್ಯಯನದ ಮುಖ್ಯತೆಯನ್ನು ನಮ್ಮ ಆಚಾರ್ಯರು ಒತ್ತಿ ಹೇಳಿರುವುದಕ್ಕೆ ಎರಡು ಕಾರಣಗಳಿವೆ. ಒಂದು, ಅದು ಬೌದ್ಧಿಕ ವಿಶ್ವಾಸವನ್ನು ಕೊಡುತ್ತದೆ. ದೃಢ ಮನಸ್ಸಿನಿಂದ ಪ್ರಯತ್ನ ವನ್ನು ಮಾಡುವುದಕ್ಕೆ ನಿಮ್ಮ ಆಸೆಯೊಂದಿಗೆ ಅದರಲ್ಲಿ ನಿಜವಾದ ವಿಶ್ವಾಸವಿರಬೇಕು. ದೃಢ ವಿಶ್ವಾಸವಿಲ್ಲದಿದ್ದರೆ, ನಿಮ್ಮ ದೌರ್ಬಲ್ಯ ಅಥವಾ ಅನಿಚ್ಛೆಯ ಕಾಲದಲ್ಲಿ ಗೊಂದಲ ಅಥವಾ ಸಂದೇಹಗಳು ನಿಮ್ಮ ಅಭ್ಯಾಸವನ್ನು ಮುಂದುವರಿಸುವುದಕ್ಕೆ ಬಿಡದೆ ತಡೆಯೊಡ್ಡು ತ್ತವೆ. ಆದುದರಿಂದ ಪ್ರತಿಯೊಂದು ಮಾರ್ಗದಲ್ಲಿಯೂ ನಿಮ್ಮ ಬಳಿ ಒಂದು ತತ್ತ್ವ ಇರಲೇಬೇಕಾಗುತ್ತದೆ.

ಭಾರತದಲ್ಲಿ ಈ ಪ್ರವೃತ್ತಿ ಎಷ್ಟು ಬಲವಾಗಿ ಎದ್ದು ಕಾಣುವು ದೆಂದರೆ, ಪ್ರಾಚೀನ ಪಂಡಿತರು ಒಂದು ವ್ಯಾಕರಣ ಪುಸ್ತಕವನ್ನು ಬರೆದರೂ ಸಹ ಅದರ ಪ್ರಾರಂಭದಲ್ಲಿ, ವ್ಯಾಕರಣದ ಅಧ್ಯಯನ ಬ್ರಹ್ಮನ ಸಾಕ್ಷಾತ್ಕಾರಕ್ಕೆ ಹೇಗೆ ಓದುಗರನ್ನು ಕರೆದೊಯ್ಯುವು ದೆಂಬುದನ್ನು ಸಾಧಿಸಲು ಯತ್ನಿಸುತ್ತಾರೆ. ಅದನ್ನು ಸಮರ್ಥಿಸಲೇ ಬೇಕು, ಇಲ್ಲದಿದ್ದರೆ ಯಾರೇ ಆಗಲಿ, ವ್ಯಾಕರಣದ ಅಧ್ಯಯನ ವನ್ನು ಏಕೆ ಕೈಗೊಳ್ಳುವರು? ಎಂದು ಅವರು ಯೋಚಿಸಿದರು. ನೀವು ಬಹುಶಃ ಹೇಳುತ್ತೀರಿ, 'ಭಾಷೆಯನ್ನು ಉತ್ತಮವಾಗಿ ಕಲಿಯಲೋಸುಗ ನಾನು ವ್ಯಾಕರಣವನ್ನು ಅಧ್ಯಯನ ಮಾಡು ತ್ತೇನೆ. ಅದು ಬ್ರಹ್ಮನನ್ನು ಕೊಡುತ್ತದೆಯೋ ಇಲ್ಲವೋ ಎಂಬುದರ ಬಗ್ಗೆ ನನಗೆ ಕಾಳಜಿ ಇಲ್ಲ' ಎಂದು. ಸಾಧ್ಯವಿಲ್ಲ! ಆಧ್ಯಾತ್ಮಿಕ ಸಾಧಕ ಅದರಿಂದ ತೃಪ್ತನಾಗಲಾರ. ಅವನೇಕೆ ತೃಪ್ತನಾಗಬೇಕು? ವೈಷ್ಣವ ರಲ್ಲಿ ಒಂದು ಸಂಸ್ಕೃತ ವ್ಯಾಕರಣವಿದೆ. ಅದರಲ್ಲಿ ಸೂತ್ರಗಳನ್ನು ಭಗವಂತನ ಹೆಸರಿನ ಸಮಾನ ಪದಗಳಿಂದ ಬರೆಯಲಾಗಿದೆ. ಅವರು ಅಂತಹ ಬುದ್ಧಿವಂತರು. ಪ್ರತಿಯೊಂದು ಪದವೂ ಭಗವ ನ್ನಾಮದ ಪರ್ಯಾಯ ಪದವಾಗಿತ್ತು. ಅದಕ್ಕೆ ಲೇಖಕನ ಬುದ್ಧಿಯ ಕಸರತ್ತು ಆವಶ್ಯಕವಾಗಿತ್ತು. ನಿಜ, ಅದೊಂದು ಅಮೋಘ ಸಾಧನೆ ಎಂದು ನೀವು ಒಪ್ಪಲೇಬೇಕು. ನೋಡಿ, ವಿದ್ಯಾರ್ಥಿಗಳು ವ್ಯಾಕರಣದ ಸೂತ್ರಗಳನ್ನು ಕಲಿಯುವಾಗ ದೇವರ ಹೆಸರನ್ನೂ ಉಚ್ಚರಿಸುತ್ತಿದ್ದರು. ಅದು ಎಷ್ಟು ಸೊಗಸಾ ಗಿದೆ ಎಂದು ನಿಮಗೆ ಅನ್ನಿಸುವುದಲ್ಲವೆ? ಏನೇ ಆದರೂ ಒಂದು ತತ್ತ್ವ ಇರಲೇಬೇಕಾಗುತ್ತದೆ. ನೀವು ಅದರಿಂದ ತಪ್ಪಿಸಿಕೊಳ್ಳ ಲಾಗುವುದಿಲ್ಲ. ಅದು ಧರ್ಮಶಾಸ್ತ್ರಗಳ ಅಧ್ಯಯನ ನಿಮಗೆ ನೀಡುವ ವಿಷಯಗಳಲ್ಲೊಂದು. ಜತೆಜತೆಗೆ ನೀವು ಆ ಮಾರ್ಗದ ಬಗ್ಗೆ ತಿಳಿದುಕೊಳ್ಳುತ್ತೀರಿ. ಅದರ ಕ್ರಮ, ವಿಧಾನ ಮತ್ತು ಅಲ್ಲಿ ಬರುವ ಭಕ್ತರ ಬಗ್ಗೆ ತಿಳಿಯುವಿರಿ. ಎಲ್ಲ ಧರ್ಮಶಾಸ್ತ್ರಗಳೂ ಅಂತಹ ಜ್ಞಾನದಿಂದ ತುಂಬಿವೆ.

ಧರ್ಮಗ್ರಂಥಗಳನ್ನು ಅಧ್ಯಯನ ಮಾಡುವುದಕ್ಕೆ ಮತ್ತೊಂದು ಕಾರಣ, ಅದೇ ಒಂದು ಆಧ್ಯಾತ್ಮಿಕ ಸಾಧನೆ. ಉದಾಹರಣೆಗೆ, ನೀವು ಭಗವದ್ಗೀತೆಯನ್ನು ಓದುತ್ತೀರಿ. ನಿಮಗೆ ಅದರಲ್ಲಿ ತತ್ತ್ವ ಕಾಣದಿರಬಹುದು, ಆದರೆ ಅದರಲ್ಲಿರುವ ಪ್ರತಿಯೊಂದೂ ನಿಮ್ಮ ಬುದ್ಧಿ ಮತ್ತು ಮನಸ್ಸಿನ ಮೂಲಕ ಆಧ್ಯಾತ್ಮಿಕ ಆಲೋಚನೆಯ ತರಂಗಗಳನ್ನು ಸೃಷ್ಟಿಸುತ್ತದೆ. ಧಾರ್ಮಿಕ ಸಾಹಿತ್ಯ ಹಾಗೆ ಮಾಡು ತ್ತದೆ. ಪ್ರತಿನಿತ್ಯ ಗೀತೆಯನ್ನು ಮೊದಲಿನಿಂದ ಕೊನೆಯ ತನಕ ಓದುವ ಭಕ್ತರು ಅನೇಕರಿದ್ದಾರೆ. ಅದು ಅವರಿಗೆ ಬಾಯಿಪಾಠ ವಾಗಿರುತ್ತದೆ. ಅವರು ಸ್ನಾನ ಮಾಡುವಾಗಲೊ ಪೂಜೆಗೆ ಅಣಿ ಮಾಡಿಕೊಳ್ಳುತ್ತಿರುವಾಗಲೊ ಅದನ್ನು ಹೇಳಿಕೊಳ್ಳುತ್ತಿರುವುದು ನಿಮಗೆ ಕೇಳಿಸುವುದು. ಅವರು ಗೀತೆಯನ್ನು ಸಂಪೂರ್ಣವಾಗಿ ಹೇಳುವರು. ಅವರು ಬೇಗ ಬೇಗ ಹೇಳಿದರೂ ಅದಕ್ಕೆ ಎರಡು ಗಂಟೆ ಕಾಲ ಹಿಡಿಸುವುದು.

ಈ ಕಾರಣಗಳಿಂದ, ಧರ್ಮಗ್ರಂಥಗಳ ಪಠಣ ಅತ್ಯಂತ ಆವ ಶ್ಯಕ. ಇದಕ್ಕಿಂತ ಹೆಚ್ಚಾಗಿ, ನಿಮ್ಮ ಇಡೀ ದಿನವನ್ನು ನೀವು ಆಧ್ಯಾ ತ್ಮಿಕ ಸಾಧನೆಯಿಂದ ಕೂಡಿರುವಂತೆ ಮಾಡಬೇಕಾದರೆ ನಿಮಗೆ ವೈವಿಧ್ಯತೆ ಬೇಕಾಗುತ್ತದೆ. ನೀವು ಕೇವಲ ಧ್ಯಾನ ಅಥವಾ ಪೂಜೆ ಮಾಡಲಾಗುವುದಿಲ್ಲ. ಧರ್ಮಗ್ರಂಥ ಪಠಣ ಒಂದು ಅದ್ಭುತ ವೈವಿಧ್ಯತೆ. ಅದು ಧ್ಯಾನದಷ್ಟು ತೀವ್ರವಾಗಿಲ್ಲದಿರಬಹುದು, ಆದರೂ ಅದು ನಿಮ್ಮ ಮನಸ್ಸನ್ನು ಭಗವಂತನ ಚಿಂತನೆಯ ಪಥದಲ್ಲಿ ಇರಿಸುತ್ತದೆ.

ನಂತರ **ನಾಮ**, ಭಗವಂತನ ಹೆಸರು ಬರುವುದು. ಇದು ಚೈತನ್ಯನ ಮೂರು ಸಾಧನೆಗಳಲ್ಲೊಂದು. ಆದರೆ ಅದನ್ನು ನಾನು ಇಲ್ಲಿ ವಿವರಿಸುತ್ತೇನೆ. ಅದು **ನಾಮೇ ರುಚಿ** ಅಥವಾ **ಜಪ** ಎಂಬ ಸಾಧನೆ. ಭಕ್ತಿಗೀತೆಗಳನ್ನು ಹಾಡುವುದೂ ಅದರಲ್ಲಿ ಸೇರಿದೆ. ಸರಮಾಲೆಯಂತೆ ಕೇವಲ ದೇವರ ಹೆಸರು ಇರುವ ಸ್ತೋತ್ರಗಳಿವೆ; ಕೆಲವು ವೇಳೆ ನೀವು ಇದನ್ನು ಹಾಡುವಿರಿ. ಅಥವಾ ಕೆಲವು ವೇಳೆ ದೇವರ ಮಹಿಮೆಯನ್ನು ಕೊಂಡಾಡುವಿರಿ. ದೇವರ ಸ್ವಭಾವ ಎಂತಹ ಆತ್ಮತೃಪ್ತಿಯನ್ನು ಕೊಡುತ್ತದೆಂದರೆ, ಅದನ್ನು ನೆನೆಯು ವುದೇ ಒಂದು ದೊಡ್ಡ ಆಧ್ಯಾತ್ಮಿಕ ಭಾವೋನ್ನತಿ. ಎಲ್ಲವೂ ಒಂದೇ

ದೇವರು. ಎಲ್ಲದರಲ್ಲಿಯೂ ಅವನು ಓತಪ್ರೋತನಾಗಿರುವನು. ಅವನೊಬ್ಬನೇ ಎಂಬ ಆಲೋಚನೆಗಳನ್ನು ಮಾಡುವುದರಿಂದಲೇ ನಿಮ್ಮ ಹೃನ್ಮನ ಮೇಲೇರುವುದು, ಮತ್ತು ಅದರಿಂದ ನೀವು ದೇವರ ಸ್ವಭಾವವನ್ನು ಕುರಿತು ಚಿಂತಿಸುವಿರಿ; ಅವನ ಮಹಿಮೆಯನ್ನು ಕೀರ್ತಿಸುವಿರಿ.

ಆದರೆ ಈ ವರ್ಗದಲ್ಲಿ ಗೊತ್ತಾದ ಸಾಧನೆಯೆಂದರೆ **ಜಪ**, ಎಂದರೆ, ಹೆಸರನ್ನು ಪುನರುಚ್ಚರಿಸುವುದು. ಇದನ್ನು ಈ ಮೂರು ರೀತಿಗಳಲ್ಲಿ ಮಾಡುತ್ತಾರೆ. ನೀವು ಜೋರಾಗಿ, ಇತರರಿಗೆ, ಈಗ ನಾನು ಮಾತನಾಡುತ್ತಿರುವಂತೆ, ಹಾವಭಾವದಿಂದ ಇತರರಿಗೆ ಕೇಳಿಸುವಂತೆ ಪುನರುಚ್ಚರಿಸಬಹುದು. ಅಥವಾ ಪಿಸುದನಿಯಲ್ಲಿ, ಹತ್ತಿರವಿದ್ದವರಿಗೆ ಮಾತ್ರ ಕೇಳಿಸುವಂತೆ ಮಾಡಬಹುದು; ಅಥವಾ ಮಾನಸಿಕವಾಗಿ ಮಾಡಬಹುದು. ಈ ಕೊನೆಯದು, ಸಹಜ ಹಾಗೂ ಅತ್ಯುತ್ತಮ ವಿಧಾನ. ಆದರೆ ಮನಸ್ಸು ಅತ್ತಿತ್ತ ಅಲೆದಾಡುವಂತಿದ್ದರೆ, ಮೆಲುದನಿಯಲ್ಲಿ ಅದನ್ನು ಮಾಡುವುದು ಒಳ್ಳೆಯದು. ಆದರೆ ಇತರರು ಅದನ್ನು ಕೇಳಿಸಿಕೊಳ್ಳುವ ಸ್ಥಳದಲ್ಲಿ ಮಾಡದಂತೆ ನೀವು ಬಹಳ ಎಚ್ಚರ ವಹಿಸಬೇಕು. ಮತ್ತು ಆಗಲೂ ಮನಸ್ಸು ಹತೋಟಿಗೆ ಬರದಿದ್ದರೆ, ಆಗ ಜೋರಾಗಿ ಮಾಡಿ. ಆದರೆ ಇತರರಿಗೆ ಅದು ಕೇಳಿಸದಂತೆ ಎಚ್ಚರವಹಿಸಬೇಕು. ಸಾಮಾನ್ಯವಾಗಿ ಅದನ್ನು ಮಾನಸಿಕವಾಗಿ ಮಾಡಲಾಗುತ್ತದೆ.

ಜಪದ ಸೌಂದರ್ಯವೆಂದರೆ, ಶಬ್ದವು ಅದಕ್ಕೆ ಸಂಬಂಧಿಸಿದ ಆಲೋಚನೆಯನ್ನು ನಿಮ್ಮಲ್ಲಿ ಉತ್ಪತ್ತಿ ಮಾಡುತ್ತದೆ, ಮತ್ತು ಆ ಆಲೋಚನೆ ಆಳವಾದಾಗ ಅದರ ಸತ್ಯತೆ ಗೋಚರವಾಗುವಂತಹ ಆಲೋಚನೆಯನ್ನು ಉತ್ಪತ್ತಿ ಮಾಡುತ್ತದೆ. ಇದು ಅದರ ತಾತ್ತ್ವಿಕ ತಳಹದಿ. ಆ ತಾತ್ತ್ವಿಕತೆಯ ಬಗ್ಗೆ ಅನೇಕ ಅಭಿಪ್ರಾಯಗಳಿವೆ. ಆದರೆ ಜಪದ ಪರಿಣಾಮದ ಬಗ್ಗೆ, ಅದರ ಬಗ್ಗೆ ಯಾವ ಸಂದೇಹವೂ ಇರಲು ಸಾಧ್ಯವಿಲ್ಲ. ದೇವರ ಹೆಸರನ್ನು ನೀವು ಪುನರುಚ್ಚರಿಸಿದಂತೆ ನಿಮ್ಮಲ್ಲಿ ದೇವರ ಭಾವನೆ ತಿಳಿಯಾಗುತ್ತಾ ಬಂದು, ಕೊನೆಗೆ ಅದು ಅತ್ಯಂತ ಸ್ಪಷ್ಟವಾಗುವುದು.

ಸಾಮಾನ್ಯವಾಗಿ ನಿಮಗೆ ಗುರುಗಳಿಂದ ದೇವರ ಒಂದು ಹೆಸರು ದೊರೆಯುವುದು. ಭಾರತೀಯ ಭಾಷೆಗಳು ದೇವರ ಹೆಸರಿನಲ್ಲಿ ಬಹಳ ಶ್ರೀಮಂತವಾಗಿವೆ. ದೇವರ ಪ್ರತಿಯೊಂದು ಹೆಸರೂ ದೇವರನ್ನು ಒಂದು ವಿಶಿಷ್ಟ ರೀತಿಯಲ್ಲಿ ಪ್ರತಿನಿಧಿಸುತ್ತದೆ. ಗುರುಗಳು ಯಾವ ಹೆಸರನ್ನು ನೀವು ಜಪಿಸಬೇಕೆಂದು ಹೇಳುವರೊ ಅದು, ನೀವು ಯಾವ ರೀತಿಯಿಂದ ದೇವರ ಬಗ್ಗೆ ಚಿಂತಿಸಬೇಕೆಂದು ಇಚ್ಛಿಸುವಿರೊ ಅದನ್ನು ಪ್ರತಿನಿಧಿಸುತ್ತದೆ; ಮತ್ತು ಅದೇ ನಿಮಗೆ ಸರಿಯಾದುದು. ನೀವು ಮತ್ತೇನನ್ನೂ ಮಾಡದೆ ದೇವರ ಹೆಸರನ್ನು ಜಪಿಸುತ್ತಾ ಇದ್ದರೆ, ಅನೇಕ ಗಂಟೆಗಳು ಅದನ್ನೇ ಮಾಡುತ್ತಿದ್ದರೆ, ನಿಮ್ಮ ಮನಸ್ಸು ಶುದ್ಧ ವಾಗುತ್ತಾ ಶಾಂತವಾಗುತ್ತಾ ಬರುವುದು, ಇಂದ್ರಿಯಗಳು ತಮ್ಮ ಲಾಲಸೆಯನ್ನು ಕಳೆದುಕೊಳ್ಳುವುವು, ಮತ್ತು ಭಗವಂತ ನಿಮಗೆ ಹತ್ತಿರವಾಗುತ್ತಾ ಬರುವನು. ಚೈತನ್ಯ ಹೇಳುತ್ತಾನೆ:

**ಚೇತೋದರ್ಪಣಮಾರ್ಜನಂ ಭವಮಹಾದಾವಾಗ್ನಿನಿರ್ವಾಪಣಂ**
**ಶ್ರೇಯಃಕೈರವಚಂದ್ರಿಕಾವಿತರಣಂ ವಿದ್ಯಾವಧೂಜೀವನಮ್ ।**
**ಆನಂದಾಂಬುಧಿವರ್ಧನಂ ಪ್ರತಿಪದಂ ಪೂರ್ಣಾಮೃತಾಸ್ವಾದನಂ**
**ಸರ್ವಾತ್ಮಸ್ನಪನಂ ಪರಂ ವಿಜಯತೇ ಶ್ರೀಕೃಷ್ಣಸಂಕೀರ್ತನಮ್ ॥**

*(ಶಿಕ್ಷಾಷ್ಟಕ, ಶ್ಲೋಕ ೧)*

'ಭಗವನ್ನಾಮ ಜಪದ ಪರಿಣಾಮ ಎಂತಹುದು ಎಂದರೆ, ಅದು ನಿಮ್ಮ ಹೃದಯಗನ್ನಡಿಯನ್ನು, ದೇವರು ಅದರಲ್ಲಿ ಪ್ರತಿಬಿಂಬಗೊಳ್ಳುವಂತೆ ಸ್ವಚ್ಛಗೊಳಿಸುತ್ತದೆ. ನಮ್ಮನ್ನು ಸುತ್ತುವರಿದಿರುವ ಪ್ರಾಪಂಚಿಕ ಜೀವನದ ಭಯಂಕರ ಕಾಳ್ಗಿಚ್ಚು ಅದರಿಂದ ಆರಿಸಲ್ಪಡುತ್ತದೆ. ಅದು ಸಜ್ಜನಿಕೆಯ ಬೆಳಕನ್ನು ಸುತ್ತಲೂ ಚೆಲ್ಲುತ್ತದೆ, ಮತ್ತು ನಾಮಜಪದಿಂದ ಜ್ಞಾನ ಸಚೇತನವಾಗುತ್ತದೆ.'

ನಿಮಗೆ ತಾತ್ತ್ವಿಕ ಜ್ಞಾನವಿದ್ದರೆ ಅದು ಒಣ ಜ್ಞಾನವಾಗಿ ಇರುತ್ತದೆ. ಭಗವಂತನ ಜ್ಞಾನ ನಾಮಜಪದ ಮೂಲಕ ಸಜೀವವಾಗುತ್ತದೆ.

'ಮತ್ತು ಆನಂದಸಾಗರ ಉಕ್ಕಿ ಮೇಲೇರುತ್ತದೆ. ಆಗಿಂದಾಗ್ಗೆ ಆಧ್ಯಾತ್ಮಿಕ ಆನಂದ ನಿಮ್ಮಲ್ಲಿ ಅಂತರ್ಯದಿಂದ ಬುಗ್ಗೆಯಂತೆ ಚಿಮ್ಮಲಾರಂಭಿಸುತ್ತದೆ. ಪ್ರತಿ ಹಂತದಲ್ಲಿಯೂ ಹೆಚ್ಚು ಹೆಚ್ಚು ಆನಂದ ಕಾಣಬರುತ್ತದೆ, ಮತ್ತು ಆಗ ನೀವು ಅಮೃತಸಾಗರದಲ್ಲಿ ಮಿಂದಂತೆ ಅನುಭವವಾಗುತ್ತದೆ. ಅಂತಹ ಭಗವನ್ನಾಮ ಜಪಕ್ಕೆ ಜಯವಾಗಲಿ!'

ಚೈತನ್ಯ ಹೇಳಿದುದು ಅದೇ. ಮತ್ತು ಈ ಪ್ರತಿಯೊಂದು ಮಾತನ್ನೂ ಅಕ್ಷರಶಃ ತೆಗೆದುಕೊಳ್ಳಬೇಕು. ಇದನ್ನು ನೀವು ಅಭ್ಯಾಸ ಮಾಡಿ, ಈ ಅನುಭವಗಳು ನಿಮಗೆ ಆಗುವುದನ್ನು ನೋಡುವಿರಿ.

ದೇವರ ಹೆಸರನ್ನು ನೀವು ಎಂತಹ ಸ್ಫೂರ್ತಿಯಿಂದ ಉಚ್ಚರಿಸಬೇಕು ಎಂಬುದನ್ನು ಚೈತನ್ಯನು ಮತ್ತೊಂದು ಶ್ಲೋಕದಲ್ಲಿ ವಿವರಿಸುತ್ತಾನೆ. ಅದನ್ನು ಸರಿಯಾಗಿ ಮಾಡುವುದಕ್ಕೆ ಒಂದು ವಿಧಾನವಿರಬೇಕು. ಅವನು ಹೇಳುತ್ತಾನೆ:

**ತೃಣಾದಪಿ ಸುನೀಚೇನ ತರೋರಪಿ ಸಹಿಷ್ಣುನಾ ।**
**ಅಮಾನಿನಾ ಮಾನದೇನ ಕೀರ್ತನೀಯಃ ಸದಾ ಹರಿಃ ॥**

*(ಶಿಕ್ಷಾಷ್ಟಕ, ಶ್ಲೋಕ ೩)*

**ತೃಣಾದಪಿ ಸುನೀಚೇನ** – ನೀವು ತೃಣಕ್ಕಿಂತ ನಿಕೃಷ್ಟರಾದವರು ಎಂಬ ಭಾವದಿಂದ ದೇವರ ಹೆಸರನ್ನು ಜಪಿಸಬೇಕು. ಹುಲ್ಲು ಬಹಳ ಕೆಳಗಡೆ ಬೆಳೆಯುತ್ತದೆ, ನೋಡಲು ಸುಂದರವಾಗಿರುತ್ತದೆ. ಜನ ಅದರ ಮೇಲೆ ನಡೆದುಹೋಗುತ್ತಾರೆ; ಅದು ಪ್ರತಿಭಟಿಸುವುದಿಲ್ಲ, ಬದಲಾಗಿ, ಅವರ ಪಾದಗಳಿಗೆ ಮೃದುವಾಗಿರುತ್ತದೆ. ಮತ್ತು ಅವರು ಹೋದ ಮೇಲೆ ಅದು ಎಂದಿನಂತಾಗುತ್ತದೆ, ದೂರುವುದಿಲ್ಲ. ಅದೇ ಇದರ ಹಿಂದಿನ ಭಾವನೆ. ಪ್ರಪಂಚದ ಎಲ್ಲಾ ಕಷ್ಟಗಳೂ ನಿಮಗೆ ಎದುರಾಗಲಿ, ಜನರು ನಿಮ್ಮನ್ನು ನಿಂದಿಸಲಿ, ನಿಮಗೆ ಏನೇ ಮಾಡಲಿ. ನಿಮ್ಮ ಮನೋದ್ದೇಶ ಇರುವುದು,

ಇತರರ ಸುಖ ಸಂತೋಷ ಮತ್ತು ಒಳಿತಿಗೆ – ನಿಮಗಾಗಿ ಅಲ್ಲ. ಯಾರಾದರೂ ನಿಮ್ಮನ್ನು ಅವಮಾನಿಸಿದರೆ, ಅವರು ಕೋಪಗೊಂಡು ನಿಂದನೆಯ ವಿಕಾರ ಮನಃಸ್ಥಿತಿಗೆ ಹೋದರಲ್ಲಾ ಎಂದು ಅವರಿಗೆ ಮರುಕ ತೋರಿ. ಯಾರೂ ಅಂತಹ ಸ್ಥಿತಿಗೆ ಒಳಗಾಗಬಾರದೆಂಬುದು ನಿಮ್ಮ ಸಹಜ ಭಾವನೆ; ಆದರೆ ನೀವು ನಿಂದನೆಗೆ ಒಳಗಾದಿರಿ ಎಂದು ನಿಮ್ಮ ಮನಸ್ಸು ಸ್ವಲ್ಪವೂ ಅದನ್ನು ಕುರಿತು ಯೋಚಿಸುವುದೇ ಬೇಡ. ಅವರು ಹಾಗೆ ಮಾಡಿದರೆಂದು ನಿಮ್ಮ ಮನಸ್ಸು ಒಪ್ಪಿಕೊಳ್ಳುವುದೂ ಬೇಡ.

**ತರೋರಪಿ ಸಹಿಷ್ಣುನಾ** – ನೀವು ಮರಕ್ಕಿಂತಲೂ ಹೆಚ್ಚು ತಾಳ್ಮೆಯಿಂದಿರಿ. ಮರ ಕಡಿಯುವವನು ಮರವನ್ನು ಕತ್ತರಿಸುವಾಗಲೂ ಮರ ಅವನಿಗೆ ನೆರಳನ್ನು ನೀಡುವುದು. ಒಬ್ಬರು ನಿಮಗೆ ನೋವುಂಟುಮಾಡಿದಾಗಲೂ ನೀವು ಅವರಿಗೆ ಒಳ್ಳೆಯದನ್ನು ಮಾಡಿ, ನಿಮಗೆ ಅಂತಹ ತಾಳ್ಮೆ ಬರುವುದು. ಮರ ಹೇಗೆ ದೂರುವುದಿಲ್ಲವೋ ಹಾಗೆ ನೀವು ದೂರದಿರಿ.

**ಅಮಾನಿನಾ** – ನಿಮ್ಮಲ್ಲಿ ಕಪಟತನವಿಲ್ಲ, ನಿಮ್ಮಲ್ಲಿ ಜಂಭ ಮತ್ತು ಅಹಂಕಾರಗಳಿಲ್ಲ. ಆದರೆ ನೀವು ಎಲ್ಲರಿಗೂ ಗೌರವ ತೋರುವಿರಿ. ಹಾಗಿರಬೇಕು ನಿಮ್ಮ ನಡವಳಿಕೆ. ನಿಷ್ಕಾಮಕರ್ಮದ ಮಾರ್ಗದಲ್ಲಿರುವಂತೆ, ನೀವು ಯಾವ ರೀತಿಯಲ್ಲಿಯೂ ಸ್ವಾರ್ಥಿಗಳಾಗದಂತೆ, ಸ್ವಹಿತ ನಿಮ್ಮ ಕರ್ಮವನ್ನು ಪ್ರವೇಶಿಸದಂತೆ ಸದಾ ಎಚ್ಚರ ವಹಿಸುವಂತೆ ಇರಬೇಕೋ ಹಾಗೆ ಭಕ್ತಿಮಾರ್ಗದಲ್ಲಿಯೂ ನಿಮ್ಮ ಅಹಂಕಾರಕ್ಕೆ ಅವಕಾಶವಿಲ್ಲದಂತೆ ಎಚ್ಚರವಿರಬೇಕು. 'ನಾನಲ್ಲ, ನೀನು, ನನ್ನ ದೇವರು. ನಾನಾರು? ನಾನು ಏನೂ ಅಲ್ಲ , ನಾನು ಏನೂ ಅಲ್ಲ. ದೇವರೇ, ನೀನೇ ಎಲ್ಲವೂ' ಎಂದು ನೀವು ಹೇಳುತ್ತೀರಿ.

ಏಕೆಂದರೆ ಅದು ಪ್ರೀತಿಯ ಸ್ವಭಾವ. ನೀವು ನನಗೆ ಶೇಕಡಾ ೯೯ ಭಾಗ ಕೊಡಿ, ನಾನು ನಿಮಗೆ ಶೇಕಡಾ ಒಂದು ಭಾಗ ಕೊಡಬಹುದು ಎಂಬ ಒಂದು ಬಗೆಯ ಪ್ರೀತಿ ಇದೆ. ಆದರೆ ಅದು ಒಂದು ಭಯಂಕರ ಸ್ಥಿತಿ. ನೀವು ಅದನ್ನು ಪ್ರೀತಿ ಎಂದು ಕರೆಯಬೇಕೋ ಏನೋ ನನಗೆ ತಿಳಿಯದು. ಆದರೆ ಒಂದು ಕಡೆಯಾದರೂ ಪ್ರೀತಿ ಇದೆಯಲ್ಲಾ ಎಂದು ನೀವು ಸಮ್ಮತಿಸಬೇಕು. ಮತ್ತೊಂದು ಬಗೆಯ ಪ್ರೀತಿ ಎಂದರೆ, ಅರ್ಧ–ಅರ್ಧ. ನೀನು ನನಗೆ ಪ್ರೀತಿ ತೋರು, ನಾನು ನಿನಗೆ ಪ್ರೀತಿ ತೋರುವೆ; ನೀನು ನನ್ನನ್ನು ಪ್ರೀತಿಸುವುದಿಲ್ಲವಾದರೆ ನಾನೂ ನಿನ್ನನ್ನು ಪ್ರೀತಿಸುವುದಿಲ್ಲ. ಆದರೆ ಆಧ್ಯಾತ್ಮಿಕ ಪ್ರೀತಿ ಹಾಗಿರಲು ಸಾಧ್ಯವಿಲ್ಲ. ಇಲ್ಲ, ನೂರಕ್ಕೆ ನೂರು ಭಾಗ ಪ್ರೀತಿ ನನ್ನದಾಗಿರಬೇಕು. ದೇವರು ನನಗೆ ಏನನ್ನಾದರೂ ಕೊಡುವನೋ ಇಲ್ಲವೋ, ಅದು ಮುಖ್ಯವಲ್ಲ. ನಾನು ಅವನಿಗೆ ನೂರಕ್ಕೆ ನೂರು ಭಾಗ ಕೊಡುತ್ತೇನೆ. ನಾನು ಏನನ್ನೂ ಬೇಡುವುದಿಲ್ಲ. ಅಹಂಕಾರ ತನಗಾಗಿ ತಾನು ಏನನ್ನೂ ಬಯಸದಂತೆ, ಅದು ತಲೆಯೆತ್ತದಂತೆ ನೀವು ಖಚಿತಪಡಿಸಿಕೊಳ್ಳಬೇಕು. ಆ ಧೋರಣೆ ಭಕ್ತಿ–ಸಾಧನೆಯ ಅಡಿಪಾಯವೇ ಆಗಿದೆ.

'ಅದು ತೀರಾ ಅವಮಾನಕರ, ನನಗೆ ಸ್ವಲ್ಪವಾದರೂ ಆತ್ಮಗೌರವವಿರಬೇಕು' ಎಂದು ನೀವು ಹೇಳುವುದಾದರೆ, 'ಆತ್ಮಗೌರವ ಎಂಬುದು ಹುಸಿ' ಎಂದು ನಾನು ಉತ್ತರಿಸುತ್ತೇನೆ. ಯಾವ ಆತ್ಮಕ್ಕಾಗಿ ನೀವು ಗೌರವವನ್ನು ಬಯಸುತ್ತಿರುವಿರಿ? ಪರಮ ಆತ್ಮ—ನಿಜವಾದ ಆತ್ಮ—ಆ ಆತ್ಮ ಎಂಬುದು ನಿಮ್ಮ ನಿಜವಾದ ಅರ್ಥವಾದರೆ, ಅದು ಗೌರವಕ್ಕೆ ಅರ್ಹ. ಅದು ದೇವರೇ. ಆದರೆ, ಜೀವನದಲ್ಲಿ ವ್ಯಕ್ತಿಗೆ ಅಂತಹ ಆತ್ಮ–ಗೌರವವಿರಬೇಕು, ಆದರೆ ಆಧ್ಯಾತ್ಮಿಕ ಜೀವನದಲ್ಲಲ್ಲ.

ಈ ಮನೋಧರ್ಮದಿಂದ ನೀವು ದೇವರ ಹೆಸರನ್ನು ಜಪಿಸಿದರೆ ನಿಮ್ಮ ಹೃದಯ ಕ್ರಮೇಣ ಶುದ್ಧವಾಗುವುದನ್ನು, ಪ್ರಾಪಂಚಿಕ ಆಸೆಗಳು ನಿಮ್ಮನ್ನು ಬಿಟ್ಟುಹೋಗುವುದನ್ನು ನೋಡುವಿರಿ. ನಿಮ್ಮಲ್ಲಿ ಪ್ರಾಪಂಚಿಕತೆ ಇದ್ದರೆ, ನಿಮ್ಮ ಸ್ವಭಾವದಲ್ಲಿ ಡೊಂಕುಗಳಿದ್ದರೆ, ನೀವು ಭಗವಂತನನ್ನು ಪ್ರಾರ್ಥಿಸಿ, ಅವನ ನಾಮಜಪ ಮಾಡಿ; ಎಲ್ಲವೂ ಸರಿಹೋಗುವುದು ಎಂದು ಕೆಲವರು ಹೇಳಿದ್ದಾರೆ. ತಾಳ್ಮೆ ಇರಲಿ, ಕ್ರಮೇಣ ಅದೆಲ್ಲಾ ಈಡೇರುವುದನ್ನು ನೀವು ನೋಡುವಿರಿ. ಆದರೆ ನಿಮಗೆ ತಾಳ್ಮೆ ಇರಲೇಬೇಕು. ಅದು ತಕ್ಷಣ ಆಗುವುದಿಲ್ಲ , ಆದರೆ ಆಗಿಯೇ ಆಗುವುದು.

ನಂತರ, ಅವನ ಐದು ವಿಧಾನಗಳಲ್ಲಿ ಐದನೆಯದಾಗಿ **ವ್ರಜೇ ವಾಸ್** ಎಂಬುದನ್ನು ಚೈತನ್ಯನು ಹೇಳುತ್ತಾನೆ. 'ವ್ರಜೇ ವಾಸ್' ಎಂದರೆ ನೀವು ಪವಿತ್ರ ಕ್ಷೇತ್ರದಲ್ಲಿ ವಾಸಿಸಬೇಕು ಎಂದರ್ಥ. ಸಹಜವಾಗಿ ಅದು ಅಮೆರಿಕಾದಲ್ಲಿ ಕಷ್ಟ. ಆದರೆ ಎಲ್ಲಾ ಪ್ರಾಚೀನ ದೇಶಗಳಲ್ಲೂ ಪವಿತ್ರ ಕ್ಷೇತ್ರಗಳಿವೆ. ಉದಾಹರಣೆಗೆ, ಬನಾರಸ್ ಅಥವಾ ವೃಂದಾವನದಂತಹ ನಗರಗಳಿವೆ. ಅಲ್ಲಿ ನಡೆಯುತ್ತಿರುವ ಮುಖ್ಯವಾದ ಸಮಾರಂಭಗಳೆಂದರೆ ಪೂಜೆ ಮತ್ತು ಧ್ಯಾನ. ಅಂತಹ ಸ್ಥಳಗಳು ಬೇಕಾದಷ್ಟಿವೆ. ನಿಮ್ಮ ದೇಶದಲ್ಲಿ ಅವು ಇಲ್ಲದಿದ್ದರೆ, ನೀವು ಅವನ್ನು ಸೃಷ್ಟಿಸಿ. ಯಾವ ಸ್ಥಳದಲ್ಲಿ ಹಲವರು ದೇವರನ್ನು ಕುರಿತು ಚಿಂತಿಸಿರುವರೊ, ಅವನಿಗಾಗಿ ಅರಸಿರುವರೊ ಮತ್ತು ಅವನನ್ನು ಪಡೆದಿರುವರೊ ಅಲ್ಲಿಯ ಧೂಳೂ ಸಹ, ಗಾಳಿಯೂ ಸಹ ಆಧ್ಯಾತ್ಮಿಕ ಶಕ್ತಿಯಿಂದ ಕೂಡಿರುತ್ತದೆ. ಪವಿತ್ರ ಕ್ಷೇತ್ರಗಳು ಸೃಷ್ಟಿಯಾಗಿರುವುದು ಹೀಗೆ.

ಎಲ್ಲಿ ಜನರು ಹೋಗಿ ದೇವರ ಚಿಂತನೆಯನ್ನು ಮಾಡುವರೊ ಅಂತಹ ಆಧ್ಯಾತ್ಮಿಕ ಪ್ರದೇಶಗಳ ಬಗ್ಗೆ ಪಶ್ಚಿಮ ದೇಶ ಗಳಲ್ಲಿ ಬಹಳ ಬಯಕೆ ಈಚಿನ ದಿನಗಳಲ್ಲಿ ಕಾಣಬರುತ್ತಿದೆ. ಅದು ಬಹು ಆವಶ್ಯಕ. ನಾವು ಆಧ್ಯಾತ್ಮಿಕತೆಗೆ ವಿರುದ್ಧವಾದ ಪ್ರಭಾವಗಳ ವಿರುದ್ಧ ನಿರಂತರವಾಗಿ ಹೋರಾಡಬೇಕಾಗಿದೆ. ಈ ಹೋರಾಟದಲ್ಲಿ ನಾವು ನಮ್ಮ ಆಧ್ಯಾತ್ಮಿಕ ಶಕ್ತಿಯನ್ನು ಬಹಳ ಕಳೆದುಕೊಳ್ಳುತ್ತೇವೆ. ನಾವು ಹೋರಾಡದೆ ಇರುತ್ತಿದ್ದರೆ ನಮ್ಮ ಶಕ್ತಿಯನ್ನು ನಮ್ಮ ಪುರೋಗಮನಕ್ಕೆ ಉಪಯೋಗಿಸಿಕೊಳ್ಳಬಹುದಾಗಿತ್ತು. ಅದರಿಂದ ನಮ್ಮ ಧ್ಯಾನ ಉತ್ತಮವಾಗುತ್ತಿತ್ತು, ನಮ್ಮ ಆಧ್ಯಾತ್ಮಿಕ ಬೆಳವಣಿಗೆ ವೇಗವಾಗುತ್ತಿತ್ತು.

***(ಸಮಾಪ್ತಿ)***

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೪

ಒಂದು ದಿನ ಮಧ್ಯಾಹ್ನ ಶ್ರೀಮಾತೆ ತಮ್ಮ ಕೋಣೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ಮಾತುಕತೆ ನಡೆಸುತ್ತಿದ್ದರು. ಅವಕಾಶ ಮಾಡಿಕೊಂಡು, ನಾನು ಅವರ ಒಬ್ಬ ಶಿಷ್ಯರ ಬಗ್ಗೆ ಕೇಳಿದೆ: ''—ಅವರು ಪ್ರಣಾಮ ಮಾಡಲು ನಿಮ್ಮ ಬಳಿಗೆ ಬರಲು ಬಿಡುತ್ತಿಲ್ಲ, ಏಕೆ?'' ಈ ಹಿಂದೆ ಬೇಲೂರು ಮಠದಲ್ಲಿ ಈ ವಿಷಯವಾಗಿ ನಾನು ಕೇಳಿದ್ದೆ; ಆದರೆ ಈಗ ಶ್ರೀಮಾತೆಯವರ ಬಾಯಿಯಿಂದಲೇ ಇದನ್ನು ಕೇಳುವ ಬಯಕೆ ನನಗೆ. ಆದ ಕಾರಣವೇ ಅವರನ್ನು ಹೀಗೆ ಪ್ರಶ್ನಿಸಿದ್ದೆ. ಆಗ ಕೋಣೆಯಲ್ಲಿ ಶ್ರೀಮಾತೆ ಹಾಗೂ ನಾನು ಬಿಟ್ಟರೆ ಬೇರೆ ಯಾರೂ ಇರಲಿಲ್ಲ. ಅವರು ಹೇಳಿದರು: ''ನನಗೆ ಪ್ರಣಾಮ ಮಾಡಲು ಬಂದು, ಒಂದು ಚೂರಿಯನ್ನು ಹೊರತೆಗೆದು, ತನ್ನ ಕೊರಳನ್ನೇ ಕತ್ತರಿಸಹೊರಟಿದ್ದ ಅವನು!'' ಆಗ ನಾನು ವಾದಿಸಿದೆ, ''ಅಮ್ಮಾ, ನೀವು ತಿಳಿದುಕೊಳ್ಳಿ, ಅವನ ಉದ್ದೇಶವಂತೂ ಹಾಗಿರಲಿಲ್ಲ. ಅವನ ಸಾಧನೆಗೆ ವಿಘ್ನವುಂಟಾಗಿತ್ತು; ಧ್ಯಾನ, ಜಪಗಳಲ್ಲಿ ಅವನ ಮನಸ್ಸು ಮಗ್ನವಾಗುತ್ತಿರಲಿಲ್ಲ. ಆದ್ದರಿಂದಲೇ ಅವನು ನೀವೇ ಸೃಷ್ಟಿ ಮಾಡಿದ ಈ ಪ್ರಾಣವನ್ನು ನಿಮ್ಮ ಪಾದಕಮಲಗಳಲ್ಲಿ ಸಮರ್ಪಿಸಲು ಪ್ರಯತ್ನಪಟ್ಟ'' ಎಂದೆ. ಅದಕ್ಕೆ ಶ್ರೀಮಾತೆ ಹೇಳಿದರು, ''ನೀನು ಬೈದದ್ದು ಸಾಕಪ್ಪ! ನಾನೇನು ಕಲ್ಲಿನ ಮೂರ್ತಿಯೆ, ಅಥವಾ ಕಾಲೀಘಾಟಿನ ಕಾಳಿ ಅಂದುಕೊಂಡನೇ, ಹಾಗೆ ಬಲಿ ಕೊಡುವುದಕ್ಕೆ? ಅಂದಿನಿಂದ ಅವನು ಇಲ್ಲಿಗೆ ಬರುವುದನ್ನು ನಿಷೇಧಿಸಿಬಿಟ್ಟಿದ್ದೆ.''

''ಆ ಸಂದರ್ಭದಲ್ಲಿ ನೀವು ತುಂಬ ಕಠೋರವಾಗಿಬಿಟ್ಟಿರಿ. ಆದರೆ ಅನಂತರ ನೀವು ಮೆತ್ತಗಾಗಬೇಕಾಯಿತು. ಅಂದರೆ, ಮೊದಲು ನಿಮ್ಮ ಭಯಂಕರ ಮೂರ್ತಿಯನ್ನು ತೋರಿಸಿದಿರಿ, ಅನಂತರ ಪ್ರೇಮಮಯಿ ಈ ಮೂರ್ತಿಯನ್ನು ತೋರಿಸಿಕೊಟ್ಟಿರಿ.''

ಶ್ರೀಮಾತೆ (ನಗುತ್ತ) : ''ಇನ್ನು ಬಯ್ಯಬೇಡಪ್ಪ! ಮಕ್ಕಳು ಬಹಳಷ್ಟು ಕೇಳಿಕೊಂಡ ನಂತರ ಅವನನ್ನು ಇಲ್ಲಿಗೆ ಬರಲು ಬಿಡುತ್ತೇನೆ. ಆದರೆ ಅವನೊಬ್ಬನೇ ಬರಕೂಡದು; ಯಾರಾದರೂ ಜೊತೆಯಲ್ಲಿರಬೇಕು. ಪ್ರಣಾಮ ಮಾಡಿದ ಕೂಡಲೇ ಹೊರಟು ಹೋಗಬೇಕು.''

ಇರಲಿ, ಮೊದಲಬಾರಿ ನಾವು ಜಯರಾಮಬಾಟಿಯಲ್ಲಿ ತಂಗಿದ್ದಾಗಲೇ ಶ್ರೀಮಾತೆಯವರ ತಮ್ಮನ ಮಗಳು ನಳಿನಿಯ ವಿವಾಹ ನಡೆಯಿತು. ವರ ಹುಗ್ಲಿ ಜಿಲ್ಲೆಯ ಗೋಹಾಟ್ ಗ್ರಾಮದ ನಿವಾಸಿ; ಅವನ ಹೆಸರು ಪ್ರಮಥನಾಥ ಭಟ್ಟಾಚಾರ್ಯ. ಈ ಪ್ರಮಥನಾಥನ ವಿಷಯ ಮುಂದೆ ಬರುವುದೆಂದೇ ಈಗ ಅವನ



ಹೆಸರನ್ನು ಹೇಳಿಬಿಟ್ಟಿದ್ದೇನೆ. ಮಾವಂದಿರು (ಶ್ರೀಮಾತೆಯವರ ತಮ್ಮಂದಿರು) ಶ್ರೀಮಾತೆಯವರ ಮೂಲಕ ನಮ್ಮಿಬ್ಬರಿಗೂ (ನನಗೆ ಹಾಗೂ ಮೋಕ್ಷದಾಚರಣನಿಗೆ) ತಿಳಿಸಿದ್ದರು—ನಾವು ಮದುವೆಗೆ ಬರುವುದಿದ್ದರೆ ಗಂಡಿನ ಕಡೆಯವರೊಂದಿಗೆ ವಾದ ಮಾಡಬೇಕೆಂದು. ಆಗಿನ್ನೂ ಹಳ್ಳಿಗಳಲ್ಲಿ ಮದುವೆ ಮಂಟಪದಲ್ಲಿ ಗಂಡು ಹಾಗೂ ಹೆಣ್ಣಿನ ಕಡೆಯವರ ನಡುವೆ ವಾದವಿವಾದ ನಡೆಯುವ ಸಂಪ್ರದಾಯ ಬಹಳವಾಗಿಯೇ ಇತ್ತು. ಮದುವೆಯ ದಿನ ರಾತ್ರಿ ನಮಗೆ ಮಲಗಲು ಭಾನಿ ಚಿಕ್ಕಮ್ಮನ ಮನೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಅಂದು ರಾತ್ರಿ ಭಾನಿ ಚಿಕ್ಕಮ್ಮ ಶ್ರೀಮಾತೆಯವರ ಮನೆಯಲ್ಲಿ ಮಲಗಿದರು. ಅವರ ಮನೆಯಲ್ಲಿ ಅಂದು ಯಾರೂ ಇಲ್ಲದ್ದರಿಂದ ನಾವು ಅಲ್ಲಿ ಮಲಗಬೇಕಾಯಿತು. ನಡುರಾತ್ರಿಯ ವೇಳೆಗೆ ಗಂಡಿನ ಕಡೆಯವರು ಬಂದರು; ಆಗ ಭಾನಿ ಚಿಕ್ಕಮ್ಮ ಕೈಯಲ್ಲಿ ದೀಪ ಹಿಡಿದುಕೊಂಡು ನಮ್ಮನ್ನು ಕರೆಯಲು ಬಂದರು.

ನಾವು ಬಂದು ಕುಳಿತುಕೊಂಡು, ಗಂಡಿನ ಕಡೆಯವರನ್ನು ಕೇಳಿದೆವು, ಅವರಲ್ಲಿ ಯಾರಾದರೂ ಇಂಗ್ಲೀಷನಲ್ಲಿ ಚರ್ಚೆ ಮಾಡಲು ಸಿದ್ಧರಿದ್ದಾರೆಯೇ ಎಂದು. ಅವರಲ್ಲಿ ಇಂಗ್ಲಿಷ್ ಬಲ್ಲವರು ಯಾರೂ ಇಲ್ಲವೆಂದು ಉತ್ತರ ಬಂತು. ಮೋಕ್ಷದಾಚರಣನ ಕಡೆಯಿಂದ ಸಂಸ್ಕೃತವನ್ನು ಕುರಿತಾಗಿ ಕೇಳಿದಾಗಲೂ ಅವರಿಂದ ಅದೇ ಉತ್ತರ ಬಂತು. ಅವರ ಒತ್ತಾಯದ ಮೇರೆಗೆ ಮೋಕ್ಷದಾಚರಣನು 'ವಿವಾಹ' ಶಬ್ದದ ಅರ್ಥವೇನೆಂದು ತಿಳಿಸಿ, ಶಾಸ್ತ್ರಗಳಿಗೆ ಅನುಸಾರವಾಗಿ ಅದನ್ನು ಕುರಿತು ವ್ಯಾಖ್ಯಾನಿಸಿ, ಒಂದು ಸಣ್ಣ ಭಾಷಣವನ್ನೇ ಕೊಟ್ಟ.

ನಳಿನಿಯ ವಿವಾಹಕ್ಕೆ ಮೊದಲು ಹಾಗೂ ಅನಂತರ, ನಾನು ಜಯರಾಮಬಾಟಿಯಲ್ಲಿದ್ದಷ್ಟು ದಿನ, ಪ್ರತಿದಿನವೂ ಮಧ್ಯಾಹ್ನ ಶ್ರೀಮಾತೆಯವರ ಊಟವಾದ ಮೇಲೆ ಅವರು ವಿಶ್ರಾಂತಿ ಪಡೆಯುತ್ತಿದ್ದಾಗ ಅವರ ಕೋಣೆಗೆ ಹೋಗುತ್ತಿದ್ದೆ. ಅಲ್ಲಿ ಅವರು ನನ್ನೊಂದಿಗೆ ಬಹಳ ಮಾತುಕತೆಯಾಡುತ್ತಿದ್ದರು. ಅವುಗಳಲ್ಲಿ ಅರ್ಥಪೂರ್ಣವಾದ, ಆಕರ್ಷಕವಾದ ಕೆಲವು ಮಾತುಕತೆಗಳನ್ನು ಇಲ್ಲಿ ನೀಡುತ್ತೇನೆ. ಈ ಮಾತುಕತೆಗಳಲ್ಲಿ ಬಹುಪಾಲು ಮೊದಲೇ ಗೊತ್ತಿದ್ದವು; ಆದರೆ ಅವರ ಬಾಯಿಯಿಂದ ಅವುಗಳನ್ನು ಕೇಳಲೆಂದೇ ಅವರ ಬಳಿ ಅವನ್ನೆಲ್ಲ ಪ್ರಶ್ನಿಸುತ್ತಿದ್ದೆ; ಅವರು ಅದಕ್ಕೆ ಉತ್ತರ ನೀಡುತ್ತಾ ಹೋಗುತ್ತಿದ್ದರು.

ಶ್ರೀಮಾತೆ: ''ಹೌದು, ಶಾರದನನ್ನು (ಸ್ವಾಮಿ ತ್ರಿಗುಣಾತೀತಾನಂದ) ಶ್ರೀರಾಮಕೃಷ್ಣರು ನಹಬತ್‌ಗೆ ಕಳುಹಿಸಿದ್ದರು. ಅವನು ನನ್ನಿಂದಲೇ ಮಂತ್ರದೀಕ್ಷೆ ಪಡೆದುಕೊಂಡ. ಹುಡುಗ ಯೋಗಿನ್ ಕೂಡಾ ನನ್ನಿಂದ ದೀಕ್ಷೆ ಪಡೆದ. ಆದರೆ ಅವನು ಬಹಳ ನಾಚುಗೆ ಸ್ವಭಾವದವನಲ್ಲವೆ? ಎಲ್ಲ ಮರೆತುಬಿಟ್ಟಿದ್ದ. ವೃಂದಾವನದಲ್ಲಿ ಮತ್ತೆ ಅವನಿಗೆ ದೀಕ್ಷೆ ನೀಡಬೇಕಾಯಿತು.

''ಶಾರದನಿಗೆ ಹಣ ಕೊಟ್ಟ ವಿಚಾರ ಕೇಳಿದೆಯಾ? ನನ್ನ ಜೀವನವೆಲ್ಲ ಠಾಕೂರರ ಬಳಿಯೇ ಇರುತ್ತಿತ್ತು. ಅವರ ಕೋಣೆಯಲ್ಲಿ ಏನು ನಡೆಯುತ್ತದೆ, ಅವರು ಎಲ್ಲಿ , ಯಾರಿಗೆ ಏನು ಹೇಳುತ್ತಾರೆ ಇತ್ಯಾದಿ. ನಾನು ನಹಬತ್‌ನಲ್ಲಿ ಕುಳಿತುಕೊಂಡೇ ಎಲ್ಲವನ್ನೂ ತಿಳಿಯುತ್ತಿದ್ದೆ. ಎಲ್ಲವನ್ನೂ ಕೇಳಿಸಿಕೊಳ್ಳುತ್ತಿದ್ದೆ. ಶಾರದನು ಮನೆಗೆ ಹೋಗಬೇಕಾದರೆ ಗಾಡಿ ಬಾಡಿಗೆಯನ್ನು ನಹಬತ್‌ನಿಂದ ತೆಗೆದುಕೊಳ್ಳಲು ಠಾಕೂರ್ ಅವನಿಗೆ ಹೇಳಿದ್ದರು.[೧] ನಾನು ಆಗತಾನೆ ನಹಬತ್‌ನ ಬಾಗಿಲ ಸಂದಿಯಲ್ಲಿ ನಾಲ್ಕು ಆಣೆಯನ್ನಿಟ್ಟು ಅಲ್ಲಿಂದ ಹೊರಟುಹೋಗಿದ್ದೆ. ಅನಂತರ ಶಾರದ ಬಂದು ಅಲ್ಲಿದ್ದ ಹಣ ತೆಗೆದುಕೊಂಡು ಹೋದ.

''ನರೇನ್ ಕೂಡ ಹಾಗೆಯೇ. 'ನೀನು ಇವತ್ತು ಇಲ್ಲೇ ಇರು' ಎಂದು ಅವನಿಗೆ ಹೇಳಿದಾಗಲೆಲ್ಲ ಅದನ್ನು ಕೇಳಿಸಿಕೊಂಡು ನಾನು ಕಡ್ಲೆಬೇಳೆಯ ದಾಲ್ ಮಾಡಲು ಆರಂಭಿಸುತ್ತಿದ್ದೆ. ಠಾಕೂರ್ ಬಹಿರ್ದೆಶೆಗೆ ಹೋಗುವಾಗ ನರೇನ್ ಊಟಕ್ಕೆ ಇರುತ್ತಾನೆ ಎಂದು ಹೇಳಲು ಬಂದರೆ, ದಾಲ್ ತಯರಾಗುತ್ತಿರುವುದನ್ನು ಹಾಗೂ ನೀರು ಕುದಿಯುತ್ತಿರುವುದನ್ನು ನೋಡುತ್ತಿದ್ದರು. ನರೇನ್ ಅಲ್ಲಿ ಊಟ ಮಾಡುವ ದಿನ ಅವನಿಗಾಗಿ ದಪ್ಪದಪ್ಪನೆಯ ಚಪಾತಿ ತಯಾರಿಸಬೇಕು ಹಾಗು ಕಡ್ಲೆಬೇಳೆಯ ದಾಲ್ ಅಡುಗೆ ಮಾಡಬೇಕು ಎಂದು ಮೊದಲೇ ಹೇಳಿದ್ದರು. ಅವನು ಅದನ್ನು ಜೀರ್ಣಿಸಿಕೊಳ್ಳುತ್ತಿದ್ದ. ಅವನಿಗೆ ಹೆಸರುಬೇಳೆ ದಾಲ್ ಹಾಗೂ ತೆಳ್ಳನೆಯ ಚಪಾತಿ ಮಾಡಿದರೆ ಸಾಲದು.

''ಹೌದು ಮಗೂ, ನಹಬತ್‌ನಲ್ಲಿ ಹೇಗೆ ಕಳೆದೆನೋ, ಅದನ್ನೆಲ್ಲ ಯಾರು ತಿಳಿದುಕೊಳ್ಳಬಲ್ಲರು? ನಟಿಯ ತಾಯಿ,[೨] ಹುಡುಗಿ ಯೋಗಿನ್, ಗೋಲಾಪ್ ಇವರೆಲ್ಲ ಅದನ್ನೆಲ್ಲ ನೋಡಿ ಹೇಳುತ್ತಿದ್ದರು, 'ಅಮ್ಮಾ ಇಷ್ಟು ಸಣ್ಣ ಕೋಣೆಯಲ್ಲಿ ಅದು ಹೇಗೆ ವಾಸ ಮಾಡುತ್ತೀರೋ!' ಎಂದು. ಕೋಣೆಯನ್ನು ನೋಡಿದ್ದೀಯಾ?—ಅಷ್ಟು ಸಣ್ಣ ಕೋಣೆಯಲ್ಲಿ ತಲೆಯ ಮೇಲೆ ಸಿಕ್ಕಗಳು ನೇತಾಡುತ್ತಿದ್ದವು. ಗೃಹಸ್ಥರ ಮನೆಯಲ್ಲಿ ಏನೇನು ಅಗತ್ಯವೋ ಮಸಾಲೆ ಇತ್ಯಾದಿ, ಅಷ್ಟೇಕೆ ಠಾಕೂರರಿಗಾಗಿ ಮೀನು ಮೊದಲಾದವೆಲ್ಲ ಅಲ್ಲಿರುತ್ತಿದ್ದವು. ಆ ಕೋಣೆಯಲ್ಲಿ ನೇರ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ—ನಿಂತರೆ ತಲೆಗೆ ಏಟು ಬೀಳುತ್ತಿತ್ತು. ನನ್ನ ತಲೆಗೆ ಅನೇಕ ಬಾರಿ ಏಟು ಬಿದ್ದು ಗಾಯವಾಗಿಬಿಟ್ಟಿತ್ತು. ನೆಲದಲ್ಲಾದರೋ, ಅಕ್ಕಿ, ಬೇಳೆ, ಪಾತ್ರಪರಡಿ, ಉಪ್ಪು, ಎಲ್ಲವೂ ಇರುತ್ತಿತ್ತು. ಇನ್ನು ಉಳಿದ ಸ್ಥಳದಲ್ಲಿ ಏಳುತ್ತಿದ್ದೆ, ಕುಳಿತು ಕೊಳ್ಳುತ್ತಿದ್ದೆ. ಯಾರಾದರೂ ಹೆಣ್ಣು ಮಕ್ಕಳು ಅಲ್ಲಿ ತಂಗಲಿ ಎಂದು ಠಾಕೂರರು ಹೇಳುತ್ತಿದ್ದರೆ, ಅವರೂ ನನ್ನೊಂದಿಗೆ ಅಷ್ಟು ಸಣ್ಣ ಜಾಗದಲ್ಲೇ ಮಲಗುತ್ತಿದ್ದರು. ಆಕೆ ಮಲಗಿ ನಿದ್ರಿಸಿದ ಬಳಿಕ ನಾನು ಕುಳಿತುಕೊಂಡೇ ರಾತ್ರಿಯನ್ನೆಲ್ಲ ಕಳೆಯುತ್ತಿದ್ದೆ!

''ಹೌದು, ಮಂದಿರದಲ್ಲಿ ಉಳಿದವರೆಲ್ಲ ಏಳುವುದಕ್ಕೆ ಮೊದಲೇ ನಾನು ಎದ್ದುಬಿಡುತ್ತಿದ್ದೆ. ಆಗ ರಾತ್ರಿ ಬಹಳ ಮಂದಿ ಅಲ್ಲಿ ತಂಗುತ್ತಿದ್ದರು. ಆದರೆ ಯಾರೂ ನನ್ನನ್ನು ನೋಡಲು ಸಾಧ್ಯವಾಗುತ್ತಿರಲಿಲ್ಲ. ಕೆಲಸಗಳನ್ನೆಲ್ಲ ಮುಗಿಸಿ, ಗಂಗೆಯಲ್ಲಿ ಸ್ನಾನ ಮಾಡಲು ಹೋಗುತ್ತಿದ್ದೆ. ಮೊದಲು ತುಂಬಾ ಭಯವಾಗುತ್ತಿತ್ತು. ಅನಂತರ ನೋಡುತ್ತಿದ್ದೆ, ನಾನು ನಹಬತ್‌ನಿಂದ ಸ್ನಾನಕ್ಕೆ ಹೋಗುವಾಗ ನಹಬತ್‌ನ ಕಡೆಯಿಂದ ಒಂದು ಬೆಳಕು ಗಂಗೆಯವರೆಗೂ ಕಾಣಿಸುತ್ತಿತ್ತು. ಆ ಬೆಳಕಿನಲ್ಲೇ ನಾನು ಸ್ನಾನಕ್ಕೆ ಹೋಗುತ್ತಿದ್ದೆ. ಸ್ನಾನ ಮಾಡಿ, ಮರಳಿ ಬಂದ ನಂತರ ಆ ಬೆಳಕು ಆರಿಹೋಗುತ್ತಿತ್ತು.

''ಬಾಗ್ದಿ ಹಾಗೂ ಬಾಗ್ದಿ ಸೊಸೆಯ ವಿಷಯ ಹೇಳಬೇಕೇನು? ಜಯರಾಮಬಾಟಿಯಲ್ಲಿ ಭೂಷಣ ಮಂಡಲ್‌ನನ್ನು ನೋಡಿದ್ದೀತಾನೆ? ಅವನ ತಾಯಿ ಹಾಗೂ ಇನ್ನೂ ಅನೇಕ ಮಂದಿ ಹೆಣ್ಣು

೧ ಬಾರಾನಗರದ ಬಜಾರಿನಿಂದ ಬೀಡನ್ ಸ್ಕ್ವೇರ್ ವರೆಗೆ ಶೇರ್ ಕುದುರೆ ಗಾಡಿಯ ಬಾಡಿಗೆ ಆಗ ಒಂದಾಣೆ ಇರುತ್ತಿತ್ತು. ಶಾರದಾ ಮಹಾರಾಜರಿಗೆ ಶ್ರೀರಾಮಕೃಷ್ಣರು ಈ ಹಣವನ್ನು ಶ್ರೀಮಾತೆಯವರಿಂದ ಪಡೆದುಕೊಳ್ಳಲು ಹೇಳುತ್ತಿದ್ದರು.

೨ ಬಾರಾನಗರದ 'ಶ್ರೀರಾಮಕೃಷ್ಣ ವಚನವೇದವನ್ನು ರಚಿಸಿದ ಶ್ರೀ 'ಮ' ಅಥವಾ ಮಹೇಂದ್ರನಾಥ ಗುಪ್ತ (ಮಾಸ್ಟರ್ ಮಹಾಶಯ)ನ ಪತ್ನಿ. ಅವರ ಮೊದಲನೆಯ ಮಗನ ಅಡ್ಡಹೆಸರು 'ನಟ' ಎಂದಾಗಿತ್ತು.

ಮಕ್ಕಳು ಗಂಗಾಸ್ನಾನ ಮಾಡಲು ಹೊರಟಿದ್ದರು. ನನ್ನನ್ನೂ ಕರೆದು ಕೊಂಡು ಹೋಗಲು ನಾನು ಹಠ ಹಿಡಿದಿದ್ದೆ. ನಾನು ಮನಸ್ಸಿನಲ್ಲೇ ನಿರ್ಧರಿಸಿದೆ, ಅವರೆಲ್ಲ ಗಂಗಾಸ್ನಾನ ಮಾಡಿ ಮರಳಿ ಬರಲಿ, ನಾನು ಠಾಕೂರರ ಬಳಿಯೇ ಇರುತ್ತೇನೆ ಅಂತ. ನಾನು ಹೊರಟಿದ್ದನ್ನು ನೋಡಿ ಲಕ್ಷ್ಮಿ (ಶ್ರೀರಾಮಕೃಷ್ಣರ ಅಣ್ಣನ ಮಗಳು) ಹಾಗೂ ಶಿವು (ಶ್ರೀ ರಾಮಕೃಷ್ಣರ ಅಣ್ಣನ ಮಗ) ನನ್ನೊಂದಿಗೆ ಹೊರಟರು. ನಾನು ಕಾಮಾರಪುಕುರದಿಂದ ಜಾಹಾನಾಬಾದ್ (ಇಂದಿನ ಆರಾಂಬಾಗ್) ವರೆಗೆ ತಲುಪಿದೆವು. ಜೊತೆಯವರು ಇನ್ನೂ ಹಗಲು ಹೊತ್ತು ಉಳಿದಿದೆಯೆಂದು ಮುಂದಕ್ಕೆ ನಡೆದರು. ಅಲ್ಲಿ ತಂಗಲಿಲ್ಲ. ತೇಲೋಭೇಲೋ[೩] ಬಯಲನ್ನು ಕತ್ತಲಾಗುವ ಮೊದಲೇ ದಾಟಿಬಿಡುತ್ತೇವೆ ಎಂದರವರು. ಆದರೆ ನನಗೆ ಇನ್ನು ಮುಂದಕ್ಕೆ ನಡೆಯಲಾಗಲಿಲ್ಲ; ಕಷ್ಟವೆನಿಸಿತು. ನಾನು ಹಿಂದೆಯೇ ಉಳಿದೆ. ನನಗೆ ಎಂದೂ ಅವರ ಹಾಗೆ ವೇಗವಾಗಿ ನಡೆದು ಅಭ್ಯಾಸವಿರಲಿಲ್ಲ. ಹಾಗಿದ್ದರೂ ನಾನು ಜೋರಾಗಿ ನಡೆದಿದ್ದೆ. ನಾನೊಬ್ಬಳೇ ಬಯಲಲ್ಲಿ ನಡೆಯುತ್ತಿದ್ದೆ. ಅಲ್ಲಿ ಡಕಾಯಿತರ ಭಯ ಅಧಿಕವಾಗಿತ್ತು. ಚಿಕ್ಕಂದಿನಲ್ಲಿ ನಾನು ಆ ಬಗ್ಗೆ ಹಲವು ಕಥೆಗಳನ್ನು ಕೇಳಿದ್ದೆ. ಸಂಜೆಯಾಯಿತು; ನಾನಿನ್ನೂ ನಡೆಯುತ್ತಿದ್ದೆ. ನನ್ನ ದೇಹ ನಡುಗುತ್ತಿತ್ತು. ಅಷ್ಟರಲ್ಲಿ ನೋಡಿದೆ, ನನ್ನೆದುರು ಒಬ್ಬ ವ್ಯಕ್ತಿ ನಿಂತಿದ್ದ, ಅವನ ತಲೆಯ ಮೇಲೆ ಕೆದರಿದ ಕೂದಲು, ಕೈಯಲ್ಲಿ ಬೆಳ್ಳಿಯ ಬಳೆ. ಅವನು ಭಾರೀ ಎತ್ತರವಿದ್ದ; ಕೈಯಲ್ಲಿ ಬೆತ್ತವನ್ನು ಹಿಡಿದುಕೊಂಡು ನನ್ನ ಕಡೆಗೇ ಬರುತ್ತಿದ್ದ. ನಾನು ಥಟ್ಟನೆ ನಿಂತುಬಿಟ್ಟೆ. ಭಯದಿಂದ ನನ್ನ ದೇಹದಲ್ಲೆಲ್ಲ ಮುಳ್ಳಿನಂತೆ ಪುಳಕ ವೆದ್ದಿತು. ಅವನು ಜಾತಿಯಲ್ಲಿ ಬಾಗ್ದಿ. ಡಕಾಯಿತನಂತೆ ಕಠೋರ ಧ್ವನಿಯಿಂದ ಕೇಳಿದ, 'ನೀನು ಯಾರು?'; ಬಳಿಕ 'ಆ' ಎಂದು ಬಾಯಿ ತೆರೆದು ನನ್ನತ್ತ ದಿಟ್ಟಿಸಿ ನೋಡತೊಡಗಿದ. ಆ ಹೆಂಗಸೂ ಅಲ್ಲಿಗೆ ಬಂದಳು. ಆಕೆ ಹೆಂಗಸು ಎಂದು ತಿಳಿದಾಗ ನನಗೆ ಧೈರ್ಯ ಬಂತು. ನಾನೆಂದೆ, 'ತಂದೆ, ನಾನು ಶಾರದೆ, ನಿನ್ನ ಮಗಳು; ನಾನು ನಿಮ್ಮ ಅಳಿಯನ ಬಳಿಗೆ ಹೋಗುತ್ತಿದ್ದೇನೆ. ನನ್ನ ಜೊತೆಯವರೆಲ್ಲಾ ಮುಂದೆ ಹೋಗಿಬಿಟ್ಟರು. ದಯವಿಟ್ಟು ನನ್ನನ್ನು ಅಲ್ಲಿಗೆ ತಲುಪಿಸಿಬಿಡಿ' ಎಂದೆ.''

ಶ್ರೀಮಾತೆ ಇನ್ನೂ ಮುಂದುವರೆಸುತ್ತಿದ್ದರು. ಅವರನ್ನು ಅಲ್ಲೇ ತಡೆದು ಕೇಳಿದೆ, ''ಅಮ್ಮಾ, ಡಕಾಯಿತನ ಕಥೆಯನ್ನು ಇನ್ನು ಹೇಳಬೇಕಾಗಿಲ್ಲ, ಶ್ರೀರಾಮಕೃಷ್ಣರ ಜೀವನ ಚರಿತ್ರೆಯನ್ನು ಓದಿದವರಿಗೆ ಅದೆಲ್ಲ ಗೊತ್ತಿದೆ. ನನಗೇನು ತಿಳಿಯಬೇಕಾಗಿದೆಯೋ ಅದನ್ನು ಹೇಳಿ.'' ಅವರು ಕೇಳಿದರು, ''ಅದೇನು?''

''ಡಕಾಯಿತ ನಿಮ್ಮತ್ತ ಬಂದು ಬಾಯಿತೆರೆದು ನೋಡಿದನಲ್ಲ, ಏನನ್ನು ನೋಡಿದ?''

ಶ್ರೀಮಾತೆ, ''ಅವನು ಕಾಳೀರೂಪವನ್ನು ನೋಡಿದ ಎಂಬಂತೆ ಆಮೇಲೆ ಹೇಳಿದ.''

''ಅಂದರೆ ಅವನಿಗೆ ನೀವೂ ಕಾಳೀರೂಪವನ್ನು ತೋರಿಸಿದಿರಿ ಅಲ್ಲವೆ? ಅಡಗಿಸಬೇಡಿ ಅಮ್ಮಾ, ಹೇಳಿಬಿಡಿ.''

ಶ್ರೀಮಾತೆ: ''ನಾನೇಕೆ ತೋರಿಸಲಿ? ಅವನು ಹಾಗೆ ನೋಡಿದನಂತೆ, ಅವನೇ ಹೇಳಿದ.''

''ಹಾಗಾದರೆ ಆಯಿತಲ್ಲ. ನೀವೇ ತೋರಿಸಿಕೊಟ್ಟಿರಿ. ಇಲ್ಲದಿದ್ದರೆ ಅವನು ಬೇರೆ ಯಾರೋ ಹೆಂಗಸನ್ನು ನೋಡಲಿಲ್ಲ, ನಿಮ್ಮನ್ನೇ ನೋಡಿದ. ನೀವು ಒಪ್ಪಿ, ಇಲ್ಲ ಬಿಡಿ; ನೀವೇ ತೋರಿಸಿಕೊಟ್ಟಿರಿ ಅಂತ ಸ್ವತಃ ಸಿದ್ಧವಾಯಿತಲ್ಲ.''

ಶ್ರೀಮಾತೆ (ನಗುತ್ತ): ''ಹಾಗೆ ನೀನು ಹೇಳುತ್ತೀಯಾ.''

'ಬೂದಿ ಬಳಿದುಕೊಂಡ ಬೆಕ್ಕು' ಎಂಬ ಮಾತಿನ ಅರ್ಥವೇನೆಂದು ಆಗಲೇ ನನಗೆ ಗೊತ್ತಾಯಿತು.[೪] ನಾನಂದೆ, ''ಅಮ್ಮಾ, ನಿಮ್ಮನ್ನು ನಾನು ನಿಮ್ಮ ಕಾಳಿ ಮೊದಲಾದ ರೂಪಗಳಲ್ಲಿ ನೋಡ ಬಯಸುವುದಿಲ್ಲ. ನಿಮ್ಮನ್ನು ಈ ರೂಪದಲ್ಲೇ ನಾನು ನೋಡ ಬಯಸುತ್ತೇನೆ. ನೀವು ತಾಯಿ, ನಾನು ಮಗು—ಅಷ್ಟೇ.''

ಶ್ರೀಮಾತೆ (ನಗುತ್ತ): ''ಅದೇ ಒಳ್ಳೆಯದಲ್ಲವೇ ಮಗೂ? ನಾನೂ ಬದುಕಿ ಉಳಿದೆ. ನಾಲಿಗೆ ಹೊರಕ್ಕೆ ಚಾಚಿ ನಿಲ್ಲಬೇಕಾಗಿಲ್ಲವಲ್ಲ!''

ಭಗಿನಿ ನಿವೇದಿತಾ ಬಸುಪಾಡಾ ಲೇನ್‌ನ ೧೬ನೇ ನಂಬರಿನ ಬಾಡಿಗೆ ಮನೆಯನ್ನು ಬಿಟ್ಟು, ೧೭ ನೇ ನಂಬರಿನ ಮನೆಗೆ ಬಾಲಿಕಾ ವಿದ್ಯಾಲಯವನ್ನು ಬದಲಾಯಿಸಿದಾಗ, ಶ್ರೀಮಾತೆಗಾಗಿ ಆ ಮನೆಯನ್ನು ಬಾಡಿಗೆ ತೆಗೆದುಕೊಂಡಳು. ಸಣ್ಣ ಅತ್ತೆ (ಅಭಯ ಕುಮಾರನ ವಿಧವೆ ಪತ್ನಿ) ಹಾಗೂ ಅವರ ಹೆಣ್ಣುಮಗು ರಾಧುವನ್ನು ಕರೆದುಕೊಂಡು ಶ್ರೀಮಾತೆ ಜಯರಾಮಬಾಟಿಯಿಂದ ಅಲ್ಲಿಗೆ ಹೋದರು.

ಅಭಯಕುಮಾರ ಸಾವನ್ನಪ್ಪಿದಾಗ ಅವನ ಪತ್ನಿ ಗರ್ಭಿಣಿಯಾಗಿದ್ದಳು. ಅವಳು ಚಿರದುಃಖಿನಿ. ಶೈಶವದಲ್ಲಿ ಅವಳ ತಾಯಿ ತೀರಿಕೊಂಡಿದ್ದರಿಂದ ಅವಳನ್ನು ಬೇರೆಯವರು ಬೆಳೆಸಿದ್ದರು. ದೌರ್ಭಾಗ್ಯವಶಾತ್ ಅವಳನ್ನು ಬೆಳೆಸಿದವರೂ ಸತ್ತುಹೋದರು.

ಈಗ ಆಕೆ ತನ್ನ ಯೌವನದ ಆರಂಭಕಾಲದಲ್ಲೇ ವಿಧವೆಯಾದಳು. ಶ್ರೀಮಾತೆ ಒಂದು ದಿನ ಅವಳ ಬಗ್ಗೆ ಹೀಗೆ ಹೇಳಿದ್ದನ್ನು ನಾನು ಕೇಳಿಸಿಕೊಂಡಿದ್ದೆ: ''ಅವಳು ಹುಚ್ಚಿಯಾಗದಿದ್ದರೆ ಇನ್ನು ಯಾರು ಆಗಬೇಕಂತೆ? ಇನ್ನೂ ಎಳೆಯ ವಯಸ್ಸಿನಲ್ಲೇ ಅವಳು ಅಷ್ಟೆಲ್ಲ ದುಃಖದುಮ್ಮಾನಗಳನ್ನು ಅನುಭವಿಸಿದಳು. ಮತ್ತೆ ಕಲ್ಕತ್ತೆಯ ಮನೆಯಲ್ಲಿ (೧೬, ಬಸುಪಾಡಾ ಲೇನ್‌ನಲ್ಲಿ) ಬೆಳಗಿನ ಹೊತ್ತು ಒಬ್ಬ ಕಳ್ಳನನ್ನು ನೋಡಿ ಭಯದಿಂದ ಬಿದ್ದುಬಿಟ್ಟಳು. ಅಂದಿನಿಂದ ಅವಳು ಹೀಗಾಗಿಬಿಟ್ಟಳು.''

---

೩. ಕಾಮಾರಪುಕುರ ಹಾಗೂ ತಾರಕೇಶ್ವರದ ನಡುವೆ ವಿಸ್ತಾರವಾಗಿ ಹರಡಿಕೊಂಡಿರುವ ಬಯಲುಪ್ರದೇಶ; ಡಕಾಯಿತರ ತಾಣವೆಂದು ಕುಪ್ರಸಿದ್ಧವಾಗಿತ್ತು .

೪ ಬಂಗಾಳಿಯಲ್ಲಿ 'ಛಾಯಿ ಛಾಪಾ ಬಿಡಾಲ್' – 'ಬೂದಿ ಬಳಿದುಕೊಂಡ ಬೆಕ್ಕು' ಎಂಬುದು ಒಂದು ನುಡಿಗಟ್ಟು. ಮರೆಮಾಚಿಕೊಂಡಿರುವುದು ಎಂದು ಅದರ ಅರ್ಥ.

ಸಣ್ಣತ್ತೆಗೆ ಹುಚ್ಚು ಹಿಡಿದದ್ದರಿಂದ ಹಾಗೂ ಮಗು ರಾಧುವಿನ ಪಾಲನೆಗೋಸ್ಕರ ಶ್ರೀಮಾತೆ ಜಯರಾಮಬಾಟಿಗೆ ಹೋಗಬೇಕಾಗಿ ಬಂತು. ಈ ಸಲ ಅವರು ಹೆಚ್ಚು ದಿನ ಕಲ್ಕತ್ತೆಯಲ್ಲಿ ಇರಲಾಗಲಿಲ್ಲ. ಅವರು ಮುಂದಿನ ಬಾರಿ ಕಲ್ಕತ್ತೆಗೆ ಬಂದಾಗ ರಾಧುವಿನ ಶೈಶವಾವಸ್ಥೆ ಕಳೆದುಹೋಗಿತ್ತು; ಅವಳು ಹುಡುಗಿಯಾಗಿದ್ದಳು ಎಂದು ಹೇಳಬಹುದು. ಈ ಬಾರಿ ಅವರು ಬಾಗ್‌ಬಜಾರಿನ ೨/೧ ನಂಬರಿನ ಸ್ಟ್ರೀಟ್‌ನಲ್ಲಿ ತಂಗಿದ್ದರು.

ನಾವು ೧೯೦೪ರ ಫಾಲ್ಗುಣ ಮಾಸದಲ್ಲಿ ಪಶ್ಚಿಮ ಭಾಗದ ಪ್ರವಾಸದಿಂದ ಮರಳಿ ಬಂದಾಗ, ಶ್ರೀಮಾತೆ ಈ ಮನೆಯಲ್ಲಿದ್ದರು. ಅಲ್ಲಿ ಶರತ್ ಮಹಾರಾಜ್, ದೀನ್ ಮಹಾರಾಜ್ (ಸ್ವಾಮಿ ಸಚ್ಚಿದಾನಂದ, ಮೊದಲನೆಯವರು) ಹಾಗೂ ಒಬ್ಬ ಹೊಸ ಹುಡುಗ ಇವರಿದ್ದರು. ಶ್ರೀಮಾತೆ ಈ ಬಾರಿ ಕಲ್ಕತ್ತಗೆ ಬರುವ ಮುನ್ನ, ಈ ಹುಡುಗ ಬಲರಾಮಬಾಬುವಿನ ಮನೆಗೆ ಬಂದು ಶರತ್ ಮಹಾರಾಜರನ್ನು ಭೇಟಿಯಾಗಿ ಹೋಗುತ್ತಿದ್ದ. ಶ್ರೀಮಾತೆ ಬಂದ ಮೇಲೆ ಅವನು ಅವರ ಮನೆಯಲ್ಲಿದ್ದುಕೊಂಡು ಅಂಗಡಿ, ಸಂತೆಗಳಿಗೆ ಹೋಗಿ, ಅಗತ್ಯವಿರುವ ಸಾಮಾನುಗಳನ್ನು ತರುವ ಕೆಲಸ ಮಾಡುತ್ತಿದ್ದ. ಅವನು ರಾಜವಲ್ಲಭಪಾರಾದಲ್ಲಿದ್ದ ತನ್ನ ತಂದೆಯ ಮನೆಯಲ್ಲೇ ಎರಡು ಬಾರಿ ಊಟಮಾಡುತ್ತಿದ್ದ; ರಾತ್ರಿ ಅಲ್ಲೇ ಮಲಗುತ್ತಿದ್ದ. ಅನಂತರ ಅವನು 'ಉದ್ಬೋಧನ'ದಲ್ಲಿ ಬ್ರಹ್ಮಚಾರಿಯಾಗಿ ಉಳಿದ. ಅವನ ಹೆಸರು ಗಣೇಂದ್ರನಾಥ. ಒಂದು ದಿನ ಅವನು ತನ್ನ ದೀಕ್ಷೆಯ ವಿಚಾರವಾಗಿ ನಮ್ಮೊಂದಿಗೆ ಚರ್ಚಿಸಿ, ತಾನು ಶ್ರೀಮಾತೆಯವರಿಂದಲೇ ದೀಕ್ಷೆ ಪಡೆಯುವುದಾಗಿ ತೀರ್ಮಾನಿಸಿದ. ಅವನು ಮೊದಲು ಸಂಪಾದನೆ ಮಾಡಿದ್ದ ಹಣವೆಲ್ಲ ಶರತ್ ಮಹಾರಾಜರ ಖಾತೆಗೆ ಜಮೆಯಾಗಿತ್ತು. ಅದರಿಂದ ಅವನು ದೀಕ್ಷೆಗಾಗಿ ಒಂದು ಧೋತಿ, ಮಾವಿನಹಣ್ಣು ಹಾಗೂ ಸಿಹಿತಿಂಡಿ ಇವನ್ನು ಖರೀದಿಸಿದ. ಹಿಂದಿನ ದಿನವೇ ಬಟ್ಟೆಯನ್ನು ತೊಳೆದು, ಒಣಗಿಸಿ ಇಟ್ಟುಕೊಂಡ. ಮರುದಿನ ಅವನ ಮಂತ್ರದೀಕ್ಷೆ ನಡೆಯಿತು. ಶ್ರೀಮಾತೆ ಆ ವಸ್ತ್ರವನ್ನು ಧರಿಸಿದರು. ಗಣೇಂದ್ರನಾಥನಿಗೆ ಫೋಟೋ ತೆಗೆಯಲು ಬರುತ್ತಿತ್ತು. ಅವನು ಆ ಮನೆಯಲ್ಲೇ ಶ್ರೀಮಾತೆಯವರ ಒಂದೆರಡು ಫೋಟೋ ತೆಗೆದಿದ್ದ.

ನಾನು ಈಗಿನಿಂದ ಶ್ರೀಮಾತೆಯವರೊಂದಿಗೇ ಇರತೊಡಗಿದೆ. ಮೇಲಂತಸ್ತಿಗೆ ಹೋಗಿ ಅವರಿಗೆ ಹರಿದ್ವಾರ, ಕನಖಲ್, ಹೃಷಿಕೇಶ ಮೊದಲಾದ ಸ್ಥಳಗಳ ಬಗ್ಗೆ ಅನೇಕ ಕತೆಗಳನ್ನು ಹೇಳುತ್ತಿದ್ದೆ. ಅದನ್ನು ಕೇಳಿ ಶ್ರೀಮಾತೆ ಚಿಕ್ಕ ಹುಡುಗಿಯಂತೆ ಆನಂದಿಸುತ್ತಿದ್ದರು.

ಒಂದು ಬಾರಿ ಒಬ್ಬಾಕೆ ದುಶ್ಶೀಲೆಯಾದ ಹೆಂಗಸು ಒಬ್ಬ ಒಳ್ಳೆಯ ವ್ಯಕ್ತಿಯ ಚಾರಿತ್ರ್ಯವನ್ನು ಕುರಿತು ದೋಷಾರೋಪಣೆ ಮಾಡಿದಳು. ಆಕೆಯ ಮಾತನ್ನು ಶ್ರೀಮಾತೆ ನಂಬಿದರೆಂದು ತಿಳಿದ ಆಶ್ರಮವಾಸಿಗಳಲ್ಲಿ ಯಾರೋ ಕೆಲವರು ಅವರ ಬಳಿಗೆ ಬಂದು, ಅವರಿಗೆ ಹಲವು ರೀತಿಯಲ್ಲಿ ತಿಳಿಯಹೇಳಿದರು; ಆದರೆ ಅದರಿಂದೇನೂ ಉಪಯೋಗವಾಗಲಿಲ್ಲ. ಅವರಿಗೆಲ್ಲ ಶ್ರೀಮಾತೆ ಒಂದೇ ಉತ್ತರ ನೀಡಿದರು: ''ನಿನಗೆ ಗೊತ್ತಿಲ್ಲ, ಅದು ಹಾಗೇ ಇದೆ.'' ಕೊನೆಗೆ ರಾಖಾಲ್ ಮಹಾರಾಜರ ಆದೇಶಕ್ಕೆ ಅನುಗುಣವಾಗಿ ನಾನು ಶ್ರೀಮಾತೆಯವರಿಗೆ ಹಲವು ವಿಧವಾಗಿ ಹೇಳಿದೆ: ''ನನಗೆ ಕೆಲವು ವರ್ಷಗಳ ಅನುಭವವಿದೆ; ಯಾರು ಅವರನ್ನು ಹಲವು ವರ್ಷಗಳಿಂದ ನೋಡಿದ್ದಾರೋ, ಅವರಿಗೆ ಚೆನ್ನಾಗಿ ಗೊತ್ತಿದೆ—ಅವರು ಅಂಥವರಲ್ಲ ಅಂತ. ಇನ್ನು ನೀವು ಅವರ ವಿಷಯವಾಗಿ ಇಂಥ ಅಭಿಪ್ರಾಯವನ್ನೇ ಪೋಷಿಸಿದರೆ, ಅವರಿಗೆ ಅಮಂಗಳವುಂಟಾಗುವುದು.'' ಅದರಿಂದಲೂ ಶ್ರೀಮಾತೆಯವರ ಅಭಿಪ್ರಾಯ ಬದಲಾಗಲಿಲ್ಲ. ಅವರಿಂದ ಅದೊಂದೇ ಉತ್ತರ ಪಡೆದೆ. ಅವರೆಂದಿಗೂ ಆ ವ್ಯಕ್ತಿಯನ್ನು ನೋಡಿರಲಿಲ್ಲ. ಆ ವ್ಯಕ್ತಿ ಕೂಡ ಇವರ ಬಳಿಗೆ ಎಂದೂ ಬರಲಿಲ್ಲ.

ಶ್ರೀಮಾತೆಯವರಿಗೆ ನೀಲಮಾಧವನೆಂಬ ಚಿಕ್ಕಪ್ಪನಿದ್ದರು.[*] ಅವರು ಅವಿವಾಹಿತರಾಗಿದ್ದರು. ಪಾಯಿಕ್‌ಪಾರಾದ ಅರಮನೆಯಲ್ಲಿ ಅಡುಗೆ ಕೆಲಸ ಮಾಡಿಕೊಂಡು, ಕೊನೆಯ ದಿನಗಳಲ್ಲಿ ಪೆನ್ಷನ್ ಪಡೆದರು. ಹಳ್ಳಿಯಲ್ಲಿ ಶ್ರೀಮಾತೆ ಹೊರತಾಗಿ ಬೇರೆ ಯಾರೂ ಅವರ ಜವಾಬ್ದಾರಿಯನ್ನು ತೆಗೆದುಕೊಳ್ಳದ ಕಾರಣ, ಈಬಾರಿ ಶ್ರೀಮಾತೆ ಅವರನ್ನು ತಮ್ಮೊಂದಿಗೆ ಕರೆದುಕೊಂಡು ಬಂದರು. ಶ್ರೀಮಾತೆ ತಮ್ಮ ಕೈಯಿಂದಲೇ ಅವರ ಸೇವೆ ಮಾಡುತ್ತಿದ್ದುದನ್ನು ನಾವು ನೋಡಿದ್ದೇವೆ. ನಾವು ಸಾಮಾನ್ಯವಾಗಿ ಅಕಾಲದಲ್ಲಿಯೂ ಮಾವಿನಹಣ್ಣನ್ನು ತರುತ್ತಿದ್ದೆವು, ಶ್ರೀಮಾತೆಗೆ ಅದು ತುಂಬ ಇಷ್ಟವಾಗಿತ್ತೆಂದು. ಹಾಗ್ ಮಾರ್ಕೆಟ್‌ನಿಂದ ಅದನ್ನು ತಂದುಕೊಟ್ಟರೆ, ಶ್ರೀಮಾತೆ ಸ್ವಲ್ಪಮಾತ್ರವೇ ತಿನ್ನುತ್ತಿದ್ದರು; ಅಥವಾ ತಿನ್ನದೆ ಇರುತ್ತಿದ್ದರು. ಉಳಿದದ್ದನ್ನೆಲ್ಲ ಈ ಚಿಕ್ಕಪ್ಪನಿಗೆ ತಿನ್ನಿಸುತ್ತಿದ್ದರು. ಇದನ್ನು ನೋಡಿ ನನಗೆ ಅಸಮಾಧಾನವಾಗುತ್ತಿತ್ತು. ಒಂದು ದಿನ ಇನ್ನು ತಡೆಯಲಾಗದೆ, ಶ್ರೀಮಾತೆಯವರಿಗೆ ಈ ಕುರಿತು ದೂರಿದೆ. ಅವರೆಂದರು; ''ಮಗೂ, ಚಿಕ್ಕಪ್ಪ ಇನ್ನೆಷ್ಟು ದಿನ ಇರುತ್ತಾರೆ? ಈಗ ಅವರಿಗೆ ಇಷ್ಟವಾದದ್ದನ್ನು ಕೊಡುವುದೇ ಒಳ್ಳೆಯದು. ನಾವಂತೂ ಬಹಳ ದಿನ ಬದುಕುತ್ತೇವೆ, ಎಷ್ಟೋ ತಿನ್ನುತ್ತೇವೆ.'' ಶ್ರೀಮಾತೆಯವರ ಈ ಮಾತನ್ನು ನಾನು ಹೀಗೆ ಬರೆದಿದ್ದೇನೆ, ನಿಜ. ಆದರೆ ಯಾವ ರೀತಿ ಅದನ್ನು ಅವರು ಹೇಳಿದರೋ ಅದನ್ನು ಅದೇ ರೀತಿ ವ್ಯಕ್ತಪಡಿಸಲು ನನಗೆ ಖಂಡಿತ ಸಾಧ್ಯವಾಗಿಲ್ಲ. ಅವರು ಮಾತಿನ ಮೂಲಕ ಒಂದು ಭಾವನೆಯನ್ನು ಹೇಗೆ ವ್ಯಕ್ತಪಡಿಸಿದರೆಂದರೆ, ಆ ಭಾವನೆ ನನ್ನ ಹೃದಯದಲ್ಲಿ ಉಂಟು ಮಾಡಿದ ಪ್ರಭಾವ ವಿಸ್ತಾರವಾಗುತ್ತ ಹೋಯಿತು. ಇನ್ನೆಂದಿಗೂ – ಏಕೆ, ರಾಧುವಿನ ವಿಷಯದಲ್ಲೂ ಕೂಡ – ಇಂಥ ನೂರಾರು ಸಂದರ್ಭ ಬಂದಾಗ, ಅಂತಹ ಸಂಗತಿಗಳನ್ನು ಕಂಡಾಗ ನನ್ನ ಮನಸ್ಸಿನಲ್ಲಿ ಅಸಮಾಧಾನವುಂಟಾಗುತ್ತಿರಲಿಲ್ಲ.

*(ಮುಂದುವರಿಯುವುದು)*

---

[*] ನೀಲಮಾಧವ ಮುಖ್ಯೋಪಾಧ್ಯಾಯ. ಶ್ರೀಮಾತೆಯವರ ತಂದೆ ರಾಮಚಂದ್ರ ಮುಖ್ಯೋಪಾಧ್ಯಾಯನ ಸಣ್ಣ ತಮ್ಮನಾಗಿದ್ದ ಅವನು.

# ನಿವೇದಿತಾ ದೃಷ್ಟಿಯಲ್ಲಿ ಶ್ರೀಮಾತೆ

**– ಡಾ.ಡಿ.ಕೆ.ರಾಜೇಂದ್ರ**

ಸ್ವಾಮಿ ವಿವೇಕಾನಂದರ ಕರೆಗೆ ಓಗೊಟ್ಟು ಭಾರತಕ್ಕೆ ಬಂದು, ಈ ದೇಶದ ಸೇವೆಗೆ ತನ್ನನ್ನೇ ಸಮರ್ಪಿಸಿಕೊಂಡವಳು ಸೋದರಿ ನಿವೇದಿತಾ. ಅವಳು ಶ್ರೀಮಾತೆಯವರ ವಿಶೇಷ ಪ್ರೀತಿ, ಅನುಗ್ರಹಗಳಿಗೆ ಪಾತ್ರಳಾಗಿದ್ದಳು. ಈ ವಿಷಯದ ಬಗ್ಗೆ ಬರೆದಿರುವ ಲೇಖಕರು ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಲೇಖಕರು.

ಮಹಾನ್ ಯೋಗಿನಿ ಶ್ರೀಶಾರದಾಮಾತೆ ಆಧ್ಯಾತ್ಮಿಕ ಲೋಕದ ಧ್ರುವತಾರೆ; ಅಂತೆಯೇ ಲೌಕಿಕ ಜಗತ್ತಿನ ಜಂಜಾಟದಲ್ಲಿ ಮಿಂದು ಬೆಂದು ಜೈಸಿ ನಿಂದ ಆನಂದಸ್ವರೂಪಿಣಿ. ಎರಡರಲ್ಲಿಯೂ ಪರಿಶುದ್ಧಾತ್ಮಕರಾಗಿ ಸಮತೋಲನವನ್ನು ಕಾಯ್ದುಕೊಂಡು ನಿಭಾಯಿಸಿದ ದಿವ್ಯ ವ್ಯಕ್ತಿತ್ವದ ಆದರ್ಶಮಾತೆ. ಎಂದೂ ಯಾವ ಹೊಣೆಗಾರಿಕೆಯಿಂದಲೂ ತಪ್ಪಿಸಿಕೊಳ್ಳದೆ, ತ್ಯಾಗಮಯಿ ಎನಿಸಿದ ಮಹಾನ್ ಚೇತನ. ಇಹ-ಪರಗಳೆರಡನ್ನೂ ಬೆರಸದೆ, ತನ್ನ ಪಾಲಿಗೆ ಬಂದದ್ದನ್ನು ಜವಾಬ್ದಾರಿಯಿಂದ ಪೂರೈಸಿದ ಪುಣ್ಯಜೀವಿ ಶ್ರೀಶಾರದಾಮಾತೆ. ಕುವೆಂಪು ಅವರ ದೃಷ್ಟಿಯಲ್ಲಿ ಆಕೆ, ''ಪರಮಪಾವನ ಹೃದಯೆ, ಕಲಿಯುಗದ ಸೀತೆ.'' ಸ್ವಾಮಿ ಹರ್ಷಾನಂದರ ದೃಷ್ಟಿಯಲ್ಲಿ ಆಕೆ,

'ತನ್ನನು ಕಡಿವಗು ತಣ್ಣನೆ ನೆರಳನು
ನೀಡುವ ವೃಕ್ಷದ ತೆರದಲಿ ಶಾರದೆ ।
ತನ್ನನು ಹಿಂಸಿಸಿ ಬಾಳಲು ಬಯಸಿದ
ಮೂರ್ಖರ ಮನ್ನಿಸಿ ಹರಸಿದಳಲ್ಲವೆ ?'

– ಇಂಥ ಅಚ್ಚರಿಯನ್ನುಂಟುಮಾಡಿದ ಮಹಾಮಾತೆ ಆಕೆ. ಶ್ರೀಶಾರದಾಮಾತೆ ಇಹ-ಪರಗಳ ಸಂಗಮ. ''ಶ್ರೀರಾಮಕೃಷ್ಣ ಗುರುದೇವ ಸಂಪ್ರೀತೆ'' ಯೆನಿಸಿ ತಮ್ಮ ಬಾಳನ್ನು ಪುಣ್ಯಗೈದಂತೆಯೇ, ಲೌಕಿಕದ ಬಂಧನ ಕೂಡ ಅವರಲ್ಲಿ ಅಷ್ಟೇ ಕ್ಲಿಷ್ಟತೆಯನ್ನುಂಟುಮಾಡಿತ್ತು. ಅವುಗಳಲ್ಲಿ ಒಂದು ಒಡಹುಟ್ಟಿದವರಿಂದ ಉಂಟಾದರೆ, ಮತ್ತೊಂದು ತಮ್ಮನ ಮಗಳಾದ ರಾಧಿಯ ರೂಪದಲ್ಲಿ ಅವರನ್ನು ಕಾಡಿದ ಬಂಧನ. ಇವುಗಳಿಂದ ಮುಕ್ತಿ ಪಡೆಯಲಿಚ್ಛಿಸದೆ, ಅವೆಲ್ಲವೂ ತಾನು ಮಾಡಬೇಕಾದ ಕರ್ತವ್ಯ ಎಂದು ಅವನ್ನೆಲ್ಲ ತಬ್ಬಿ ನಿಂತವರು ಅವರು.

ಶ್ರೀಶಾರದಾಮಾತೆಯವರ ಬದುಕು ತ್ಯಾಗದಿಂದ ಆವೃತವಾದದ್ದು. ಈ ದೃಷ್ಟಿಯಿಂದ ಆಕೆ ತ್ಯಾಗಮಯಿ; ತನ್ನ ಸರ್ವಸ್ವವನ್ನೂ ಪರಹಿತಕ್ಕಾಗಿ ಸಮರ್ಪಿಸಿದ ದಿಟ್ಟೆ. ಶ್ರೀರಾಮಕೃಷ್ಣರ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಶ್ರೀಮಾತೆ ವಹಿಸಿದ ಪಾತ್ರ, ಪಟ್ಟ ಶ್ರಮ ಅಸದಳವಾದದ್ದು. ಶ್ರೀರಾಮಕೃಷ್ಣ ಸಂಘದ ಚಟುವಟಿಕೆಗಳಲ್ಲಿ ಶ್ರೀಮಾತೆಯವರದು ಸದ್ದುಗದ್ದಲವಿಲ್ಲದ ಅನುಪಮ ಸೇವೆ. ಅವರು ನಿರ್ವಹಿಸುತ್ತಿದ್ದ ಕಾರ್ಯಗಳು ಕೆಲವರಿಗೆ ಅಚ್ಚರಿಯನ್ನುಂಟುಮಾಡಿದ್ದೂ ಹೌದು, ಇನ್ನೂ ಕೆಲವರಿಗೆ ಭಕ್ತಿ ಗೌರವವನ್ನುಂಟುಮಾಡಿದ್ದೂ ಹೌದು. ಆದರೆ ಇದಾವುವೂ ಸುಳ್ಳಲ್ಲ. ಶ್ರೀಮಾತೆಯ ವ್ಯಕ್ತಿತ್ವವೇ ಅಂತಹುದು. ಸಾಮಾನ್ಯರಿಗೆ ಸುಲಭವಾಗಿ ಗ್ರಹಿಸಲಾಗದ ಕಗ್ಗಂಟಾಗಿತ್ತು. ತಮಗೆ ಕೆಟ್ಟದ್ದನ್ನು ಬಯಸಿ, ಉದ್ದಕ್ಕೂ ತೊಂದರೆ ಕೊಟ್ಟವರಿಗೂ ಅವರು ಸಹಾಯ ಹಸ್ತ ನೀಡಿದಾಗ ಕೆಲವರು ಶ್ರೀಮಾತೆಯವರನ್ನು ಪ್ರಶ್ನಿಸಿದ್ದೂ ಉಂಟು. ಒಂದು ಸಂದರ್ಭದಲ್ಲಿ ಅಂತಹ ಪ್ರಶ್ನೆಗೆ ಅವರು ಕೊಟ್ಟ ಉತ್ತರ, ಅವರ ವ್ಯಕ್ತಿತ್ವದ ಪ್ರತಿಬಿಂಬವೆನಿಸುತ್ತದೆ: ''ಮಗು, ನನ್ನಂಥ ಜೀವನವನ್ನು ನೀನು ಎಲ್ಲಿಯಾದರೂ ನೋಡಿದ್ದೀಯೇನು? ಪರಮ ಸತ್ಯವನ್ನು ಕುರಿತು ಚಿಂತಿಸುವವರ ಮನಸ್ಸು ಸೂಕ್ಷ್ಮ ಹಾಗೂ ಪರಿಶುದ್ಧವಾಗಿರುತ್ತದೆ, ಭಾವನೆಗಳು ಉತ್ಕಟವಾಗಿರುತ್ತವೆ. ಇತರರಿಗೆ ಅದು ಮೋಹದಂತೆ ಕಾಣಬಹುದು. ಮಿಂಚು ಹೊಡೆದಾಗ ಗಾಜಿನ ಮೇಲೆ ಪ್ರತಿಬಿಂಬಿಸುತ್ತದೆಯೇ ಹೊರತು ಮರದ ಮೇಲಲ್ಲ.'' ಶ್ರೀಮಾತೆಯವರ ತ್ಯಾಗಬುದ್ಧಿ, ತಾಳ್ಮೆ, ಸಹನೆ, ಪರಹಿತಚಿಂತನೆ, ಮಾತೃಹೃದಯ ಭಕ್ತಮಂಡಳಿಯನ್ನು ಬಂಧಿಸಿದ್ದಂತೆಯೇ, ಅವರಿಗೆ ಕೆಲವೊಮ್ಮೆ ಬೆರಗನ್ನೂ ಉಂಟುಮಾಡಿತ್ತು.



ಶ್ರೀರಾಮಕೃಷ್ಣ ಸಂಘದಲ್ಲಿ ಗುರುದೇವ ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ ಮತ್ತು ಶಿಷ್ಯವೃಂದದ ಶಕ್ತಿ ಒಂದು ಕಡೆ

ಯಾದರೆ, ಶ್ರೀಮಾತೆ ಶ್ರೀಶಾರದಾದೇವಿಯವರ ಶಕ್ತಿ ಮತ್ತೊಂದೆಡೆ ಅಷ್ಟೇ ತೂಕದ್ದು. ಅವರ ಕಾರ್ಯಗಳೆಲ್ಲವೂ ಗುಪ್ತಗಾಮಿನಿಯಾಗಿ ಲೋಕಕಲ್ಯಾಣಕ್ಕಾಗಿ ಶ್ರಮಿಸಿದುದಾಗಿತ್ತು. ಶ್ರೀರಾಮಕೃಷ್ಣರು ಹೇಳುತ್ತಿದ್ದಂತೆ, ''ದಾಸಿಯಾದವಳು ತನ್ನ ಯಜಮಾನಿಯ ಮಗುವನ್ನು ತನ್ನದೆಂಬಂತೆಯೇ ಭಾವಿಸಿತ್ತಾಳೆ. ಆದರೆ ಕೆಲಸ ಮುಗಿದೊಡನೆಯೇ ಆ ಮಗುವಿನ ಮೇಲಿನ ಅಭಿಮಾನ ಹಾರಿ ಹೋಗುತ್ತದೆ. ಸಂಸಾರಿಯಾದವನೂ ಅಷ್ಟೇ! ಇರುವ ತನಕ ಶುದ್ಧ ಪ್ರೇಮದಿಂದ ಜೀವನ ನಡೆಸಬೇಕು. ಆದರೆ ತನ್ನ ಗುರಿ ಮಾತ್ರ ಪರಮಾತ್ಮನೊಬ್ಬನೇ ಎಂಬುದನ್ನು ಮರೆಯಬಾರದು.'' ಶ್ರೀಮಾತೆಯವರು ತನ್ನ ಗುರುವಿನ ಈ ಸೂತ್ರವನ್ನು ಹಿಡಿದು ಬದುಕನ್ನು ನಡೆಸಿದವರು. ಸಂಕುಚಿತ ಮನಸ್ಸಿನವರಿಗೆ ಅದು ವಿಚಿತ್ರವಾಗಿ ಕಂಡರೆ, ವಿಶಾಲ ಹೃದಯಿಗಳಿಗೆ ಅದು ಪರಮೋಚ್ಚ ಸಿದ್ಧಿಯ ಸೂತ್ರವಾಗಿ ಕಂಡಿತು.

ಹೀಗೆ ಅವರ ಮನಸ್ಸನ್ನು ಅರಿತವರಲ್ಲಿ, ಅವರ ತ್ಯಾಗಜೀವನವನ್ನು ಅರ್ಥಮಾಡಿಕೊಂಡವರಲ್ಲಿ ಹಾಗೂ ಗುರುದೇವರ ಮೇಲೆ ಅವರಿಗಿದ್ದ ಭಕ್ತಿ-ಗೌರವಗಳನ್ನು ಮನಗಂಡವರಲ್ಲಿ ಸೋದರಿ ನಿವೇದಿತಾ ವಿಶೇಷವಾಗಿ ಗಮನ ಸೆಳೆಯುತ್ತಾಳೆ. ಭಾರತದಲ್ಲಿ ಸ್ತ್ರೀಯರ ಏಳಿಗೆಗಾಗಿ, ಅವರ ಉನ್ನತೀಕರಣಕ್ಕಾಗಿ ಸ್ವಾಮಿ ವಿವೇಕಾನಂದರು ಕರೆತಂದ ದಿಟ್ಟ ವ್ಯಕ್ತಿತ್ವದ ಹಾಗೂ ಪರರ ಉದ್ಧಾರಕ್ಕಾಗಿ ತನ್ನ ಸುಖವನ್ನು ತ್ಯಾಗ ಮಾಡಿದ ಮಹಾ ಸ್ತ್ರೀಶಕ್ತಿ ನಿವೇದಿತಾ. ಭಾಷಾಸಮಸ್ಯೆ, ಸಾಂಪ್ರದಾಯಿಕ ಆಚರಣೆಗಳ ಕಾರಣ ಶ್ರೀಮಾತೆಯವರ ಮತ್ತು ನಿವೇದಿತಾರವರ ಬಾಂಧವ್ಯ ಆರಂಭದಲ್ಲಿ ಸ್ವಲ್ಪಮಟ್ಟಿಗೆ ನಿಧಾನ ಗತಿಯದ್ದಾದರೂ ಕಾಲ ಕಳೆದಂತೆ ಅದು ವಿಶೇಷವಾಗಿ ಬೆಳೆದು ಬಂತು. ತಾಯಿಯನ್ನು ತೊರೆದು ಬಹಳ ದೂರದ ಭಾರತಕ್ಕೆ ಬಂದಿದ್ದ ನಿವೇದಿತಾಳಿಗೆ ಶ್ರೀಮಾತೆಯವರೇ ತಾಯಿಯ ಪ್ರೀತಿ, ಮಮತೆಗಳನ್ನು ಕೊಟ್ಟಿದ್ದರು. ಆಕೆ ಕೂಡಾ ತಾಯಿಯ ಮಡಿಲಿನ ಸುಖವನ್ನು ಅನುಭವಿಸಿ ಆನಂದಿಸಿದ್ದಳು. ಶ್ರೀಮಾತೆಯವರ ಪ್ರಥಮ ಭೇಟಿಯಲ್ಲಿಯೇ ನಿವೇದಿತಾಳಿಗೆ ಆನಂದದ ಅತೀವ ಅನುಭವ ಉಂಟಾಗಿತ್ತು. ಅದನ್ನು ಆಕೆ ಒಂದೆಡೆ ಬರೆಯುತ್ತಾಳೆ: ''ಅವರ ಮಧುರತೆ, ಪ್ರಶಾಂತತೆ, ಅವರ ಆಳ ಅನುಭವ ಮತ್ತು ಪ್ರೇಮ: ಇವು ಕಲ್ಪನೆಗೆ ಮೀರಿದವು. ಅವರ ಜೀವನ ಎಂಥ ಅದ್ಭುತ! ವಿಸ್ತಾರವಾದ ಪೂಜಾಪರಿಕರಗಳ ನಡುವೆ ಅವರು ವಾಸಿಸುತ್ತಾರೆ. ಇತರರು ಅವರ ಪೂಜೆಗೆ ಅಣಿಮಾಡಿಕೊಡುತ್ತಾರೆ. ತಮ್ಮ ಪತಿಯನ್ನೇ ದೇವರೆಂದು ಭಾವಿಸಿ ಪೂಜಿಸಿದರೂ ಆ ಭಕ್ತಿಯಲ್ಲಿ ಎಂತಹ ಮಾನವೀಯತೆ ಇದೆ! ಅಂದು ಅವರು, 'ಅವರನ್ನು (ತಮ್ಮ ಪತಿಯನ್ನು) ಸುಮ್ಮನೆ ನೋಡುತ್ತಿರುವುದೇ ಮಹದಾನಂದ' ಎಂದರು. ಕಮಲಪತ್ರದ ಮೇಲಿನ ನೀರ ಹನಿಯಂತೆ ಎಲ್ಲಾ ಕಡೆಯಲ್ಲೂ ಪ್ರಪಂಚವನ್ನು ಮುಟ್ಟಿದರೂ, ಅದರ ಕಲುಷತೆ ಅವರನ್ನು ಸೋಕುವುದೇ ಇಲ್ಲ. ಅವರು ನಿಜವಾಗಿಯೂ ಮಠದ ಅಧ್ಯಕ್ಷೆಯಾದರೂ ಮಗುವಿನಂತೆ ಇರುವರು.''

ಬೇರೊಂದು ಸಂಸ್ಕೃತಿಯಿಂದ ಬಂದ ನಿವೇದಿತಾ ಇಲ್ಲಿಯ ಸಂಸ್ಕೃತಿಯನ್ನು ಅರ್ಥಮಾಡಿಕೊಂಡು, ಗೌರವಿಸಿ ಶಾರದಾಮಾತೆಯನ್ನು ತಾಯಿಯಂತೆ ಭಾವಿಸಿದ್ದು ಸಾಮಾನ್ಯ ಸಂಗತಿಯಲ್ಲ. ಮತ್ತೊಂದೆಡೆ ಆಕೆ ಬರೆಯುತ್ತಾಳೆ, ''ನನಗೆ ಯಾವಾಗಲೂ ಅನಿಸುತ್ತದೆ, ಅವರು ಭಾರತೀಯ ಸ್ತ್ರೀ ಆದರ್ಶದ ವಿಷಯವಾಗಿ ಶ್ರೀರಾಮಕೃಷ್ಣರ ಕೊನೆಯ ಮಾತು ಎಂದು. ಆದರೆ ಅವರು ಹಳೆಯ ಆದರ್ಶದ ಕೊನೆಯ ಪ್ರತಿನಿಧಿಯೋ ಅಥವಾ ಒಂದು ಹೊಸ ಆದರ್ಶದ ಅಗ್ರಗಾಮಿಯೊ?'' ಎಂದು.

ನಿವೇದಿತಾಳಿಗೆ ಶ್ರೀರಾಮಕೃಷ್ಣರ ಬಗ್ಗೆ ಇದ್ದ ಭಕ್ತಿ, ತನ್ನ ಗುರು ಸ್ವಾಮಿ ವಿವೇಕಾನಂದರ ಬಗ್ಗೆ ಇದ್ದ ಗೌರವ ಭಾವನೆ ಒಂದು ತೆರನಾದದ್ದಾದರೆ; ಶ್ರೀಮಾತೆಯವರ ಬಗ್ಗೆ ಇದ್ದ ಭಕ್ತಿ ಗೌರವಗಳೇ ವಿಶೇಷ ರೀತಿಯದ್ದಾಗಿತ್ತು. ಅವರ ಸಮಗ್ರ ವ್ಯಕ್ತಿತ್ವ ನಿವೇದಿತಾಳನ್ನು ಆಕರ್ಷಿಸಿತ್ತು, ಆವರಿಸಿತ್ತು. ಅವರಿಗಾಗಿ ಎಲ್ಲ ರೀತಿಯ ಸೇವೆಯನ್ನೂ ಸಲ್ಲಿಸಲು ಆಕೆ ಸಿದ್ಧಳಾದಳು.

ಅವರು ಮಲಗುವ ಕೋಣೆಯನ್ನು ಸ್ವಚ್ಛಗೊಳಿಸಿ ಸಿದ್ಧಗೊಳಿಸುವ ಕಾರ್ಯವನ್ನು ಅತ್ಯಂತ ನಿಷ್ಠೆ ಹಾಗೂ ಭಕ್ತಿಪೂರ್ವಕವಾಗಿ ಆಕೆ ನಿರ್ವಹಿಸುತ್ತಿದ್ದಳು. ಅದರಲ್ಲಿಯೇ ಒಂದು ತೆರನಾದ ಗೌರವ ಭಾವವನ್ನು ಹಾಗೂ ಆನಂದವನ್ನು ಆಕೆ ಅನುಭವಿಸುತ್ತಿದ್ದಳು. ಶ್ರೀಮಾತೆಯವರಿಗೆ ವಾತದಿಂದಾಗಿ ನಡೆಯುವುದು ಕಷ್ಟವಾದಾಗ ಅವರನ್ನು ಎತ್ತಿಕೊಂಡು ಮೇಲಿನ ಮಹಡಿಗೆ ಕರೆದೊಯ್ಯುತ್ತಿದ್ದಳು. ಆಗ ತಾನು ಅನುಭವಿಸುತ್ತಿದ್ದ ಆ ಸ್ಪರ್ಶದ ಆನಂದವನ್ನು ಆಕೆ ತನ್ನ ಆತ್ಮೀಯರೊಂದಿಗೆ ಹಂಚಿಕೊಳ್ಳುತ್ತಿದ್ದದ್ದೂ ಉಂಟು.

ಸ್ವಾಮಿ ಅಸಿತಾನಂದರು ಅವರೀರ್ವರ ಆತ್ಮೀಯವಾದ ಸಂಬಂಧವನ್ನು ಕುರಿತು ಬರೆಯುತ್ತಾರೆ: ''ಒಮ್ಮೆ ಶ್ರೀಮಾತೆಯವರು ನಿವೇದಿತಾಳ ಹಣೆಯ ಮೇಲೆ ಸಿಂಧೂರವನ್ನು ಇಡಿಸಿದರು. ಆಗಿನ ಅವಳ ಸೌಂದರ್ಯ, ಮುಖದ ಕಾಂತಿಯನ್ನು ನೋಡಿ ಶ್ರೀಮಾತೆಯವರಿಗೆ ಮಹದಾನಂದ. ಐದು ವರ್ಷದ ಹುಡುಗಿಯನ್ನು ಚುಂಬಿಸುವಂತೆ ಅವಳನ್ನು ಚುಂಬಿಸಿ ಆದರಿಸಿದರು.'' ಅವರೀರ್ವರ ನಡುವೆ ಇದ್ದ ಪರಸ್ಪರ ಪ್ರೀತಿ, ಪ್ರೇಮ, ಆತ್ಮೀಯತೆ ಅಸಾಮಾನ್ಯ ರೀತಿಯದ್ದಾಗಿತ್ತು. ಪರಸ್ಪರ ಬಿಟ್ಟಿರಲಾರದಷ್ಟು ಅದು ಬೆಸೆದುಹೋಗಿತ್ತು. ಕೆಲವರಲ್ಲಿ ಅಸೂಯೆಯನ್ನು ಬಿತ್ತುವಷ್ಟು ಅದು ಬೆಳೆದುಹೋಗಿತ್ತು. ಸಂಪ್ರದಾಯವಾದಿಗಳು ಇದರಿಂದ ಕಿಡಿಕಾರಿದ್ದೂ ಹೌದು. ಒಮ್ಮೆ ನಿವೇದಿತಾಳೇ ಪ್ರಸಾದವನ್ನು ಸಿದ್ಧಪಡಿಸಿ, ಶ್ರೀರಾಮಕೃಷ್ಣರಿಗೆ ನಿವೇದಿಸಿ ಅದನ್ನು ಶ್ರೀಮಾತೆಯವರಿಗೆ ಕೊಟ್ಟಾಗ ಮಡಿವಂತ ಮಹಿಳೆಯರು ಸಿಡಿಮಿಡಿಗೊಂಡು ಶ್ರೀಮಾತೆಯವರನ್ನು ಪ್ರಶ್ನಿಸಿದರು. ಆಗ ಅವರು ಕೊಟ್ಟ ಉತ್ತರ ಅವರೀರ್ವರ ನಡುವಣ ಬಾಂಧವ್ಯಕ್ಕೆ ಸಾಕ್ಷಿ. ''ನಿವೇದಿತಾ ನನ್ನ ಮಗಳು. ಅಡುಗೆ ಮಾಡಿ ಶ್ರೀರಾಮಕೃಷ್ಣರಿಗೆ ಅನ್ನ ನೈವೇದ್ಯ ಮಾಡುವ ಅಧಿಕಾರ ಅವಳಿಗಿದೆ. ಅವಳು ನೀಡಿದ ಪ್ರಸಾದವನ್ನು ಪರಮಾನಂದದಿಂದ ಯಾವ ಅಳುಕೂ ಇಲ್ಲದೆ ನಾನು ಸ್ವೀಕರಿಸುತ್ತೇನೆ. ಈ ವಿಷಯದಲ್ಲಿ ಯಾರಿಗಾದರೂ ವಿರೋಧವಿದ್ದರೆ ಅವರು ತಮ್ಮ ಪಾಡಿಗೆ ತಾವಿರಬಹುದು.'' ಶ್ರೀಮಾತೆಯವರ ಈ ದಿಟ್ಟ ನುಡಿಗಳು ಹಲವರಿಗೆ ಎಚ್ಚರಿಕೆಯ ಮಾತುಗಳೂ ಆಗಿದ್ದವು. ಜೊತೆಗೆ ಶ್ರೀಮಾತೆಯವರ ಮನದಲ್ಲಿ

ನಿವೇದಿತಾಳ ಸ್ಥಾನ ಎಂಥಹುದೆಂಬುದನ್ನೂ ತೆರೆದಿಟ್ಟಿದ್ದವು. ಇಬ್ಬರು ವಿಶಾಲ ಹೃದಯಿಗಳ ಅಂತರಾಳದ ಭಾವನೆಗಳ ಪ್ರತಿ ರೂಪವಾಗಿ ಆ ಮಾತುಗಳು ಹೊರಹೊಮ್ಮಿದ್ದವು.

ನಿವೇದಿತಾ ಭಾರತವನ್ನು ಪ್ರೀತಿಸಿದಷ್ಟೇ, ತನ್ನ ಗುರು ಸ್ವಾಮಿ ವಿವೇಕಾನಂದರನ್ನು ಗೌರವಿಸಿದಷ್ಟೇ, ಶ್ರೀಮಾತೆಯವರನ್ನು ಪ್ರೀತಿ ಗೌರವಗಳಿಂದ ಆರಾಧಿಸಿದ್ದಳು. ಅವರ ಆ ಆದರ್ಶ, ತ್ಯಾಗಬುದ್ಧಿ, ವಾತ್ಸಲ್ಯಭಾವನೆ, ತಾಯಿಯ ಮಮತೆ ಎಲ್ಲವೂ ಆಕೆಯನ್ನು ಮುಗ್ಧಳನ್ನಾಗಿಸಿದ್ದವು. ಶ್ರೀಮಾತೆಯವರನ್ನು ಕುರಿತು ಒಂದು ಸಂದರ್ಭದಲ್ಲಿ ನಿವೇದಿತಾ ಹೇಳಿರುವುದು ಹೀಗೆ: ''ಶ್ರೀಮಾತೆಯವರು ಒಬ್ಬ ಸರಳ ಹಿಂದೂ ಮಹಿಳೆ ಅಷ್ಟೇ. ಆದರೂ, ನನಗನಿಸುವಂತೆ ಅವರು ಇಂದು ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠ ಮಹಿಳೆ.'' ಶ್ರೀರಾಮಕೃಷ್ಣರೇ ಆ ದಿವ್ಯಮಾತೆ ಶ್ರೀಶಾರದಾದೇವಿಯವರ ಬಗ್ಗೆ ಹೇಳುವ ಮಾತೆಂದರೆ: ''ಆಕೆ ಅಷ್ಟು ಪರಿಶುದ್ಧಳಲ್ಲದಿದ್ದರೆ, ಪವಿತ್ರಾತ್ಮಳಲ್ಲದಿದ್ದರೆ ನನ್ನ ಸಂಯಮದ ಕಟ್ಟೆ ಒಡೆದು ಬಿಡುತ್ತಿತ್ತೋ ಏನೊ? ಹೇಗೆ ಹೇಳುವುದು?'' ಶ್ರೀರಾಮಕೃಷ್ಣರ ಈ ಮಾತು ಶ್ರೀಮಾತೆಯವರ ವ್ಯಕ್ತಿತ್ವವನ್ನು ಮತ್ತಷ್ಟು ಎತ್ತರಕ್ಕೆ ಕೊಂಡೊಯ್ಯುತ್ತದೆ. ಅವರೀರ್ವರ ಸಂಬಂಧವನ್ನು ಚೆನ್ನಾಗಿ ಅರಿತ ನಿವೇದಿತಾ ಮತ್ತೊಂದು ಸಂದರ್ಭದಲ್ಲಿ ಹೇಳುವ ಮಾತೆಂದರೆ: ''ಅವರು ಏಕಕಾಲದಲ್ಲೇ ಸತಿ ಮತ್ತು ಸಂನ್ಯಾಸಿನಿಯಾಗಿದ್ದರು. ಪತಿಯ ಶಿಷ್ಯರಲ್ಲಿ ಅವರು ಪ್ರಥಮರು... ತಾವು ಅವರ ಸತಿ ಎಂಬುದನ್ನು ಎಂದೋ ಮರೆತುಬಿಟ್ಟಿದ್ದಂತೆ ಕಾಣುತ್ತಿದ್ದರು. ಶಿಷ್ಯರಲ್ಲಿರಬೇಕಾದ ಶ್ರದ್ಧಾಭಕ್ತಿಗಳೊಂದೇ ಅವರಲ್ಲಿ ಇದ್ದದ್ದು.''

ನಿವೇದಿತಾ ಶ್ರೀಮಾತೆಯವರ ಅಂತರಂಗವನ್ನು, ಅವರಲ್ಲಿನ ಮಾನವೀಯ ಭಾವನೆಗಳ ಸಾರಸರ್ವಸ್ವವನ್ನು ಚೆನ್ನಾಗಿ ಗ್ರಹಿಸಿ ಅದಕ್ಕೆ ಮಾರುಹೋಗಿದ್ದಳು. ''ನನಗಂತೂ ಅವರ ಚಾರಿತ್ರ್ಯದ ಪವಿತ್ರತೆಯಷ್ಟೇ ಮುಖ್ಯ ಅವರಲ್ಲಿರುವ ರಾಣಿಯ ಗಾಂಭೀರ್ಯ ಮತ್ತವರ ಮನಸ್ಸಿನ ಔದಾರ್ಯ... ಅವರ ಜೀವನವೇ ಒಂದು ನಿರಂತರ ನೀರವ ಧ್ಯಾನದಂತೆ ಇದೆ. ಅವರ ಅನುಭವವೆಲ್ಲ ಆಧ್ಯಾತ್ಮಿಕ ಸಂಸ್ಕೃತಿಗೆ ಸೇರಿದುದು'' ಎಂಬ ತುಂಬು ಹೃದಯದ ಭಾವನೆಗಳನ್ನು ಆಕೆ ವ್ಯಕ್ತಪಡಿಸುತ್ತಾಳೆ.

ಸೋದರಿ ನಿವೇದಿತಾ ಸೌಂದರ್ಯದ ನಿಧಿ, ವಿಚಾರದ ಖನಿ, ಕ್ರಾಂತಿಯ ಕಿಡಿ. ಆದರೆ ಅಷ್ಟೇ ಅಧ್ಯಾತ್ಮಕ್ಕೆ ಶರಣಾದವಳು. ವೇದಾಂತವನ್ನು ಅರ್ಥಮಾಡಿಕೊಂಡವಳು. ಆದರೆ ಅದು ಒಣ ಆಡಂಬರದ ಅಧ್ಯಾತ್ಮವಲ್ಲ, ಸ್ವಾಮಿ ವಿವೇಕಾನಂದರು ಉಪದೇಶಿಸಿದ ಅನುಷ್ಠಾನ ವೇದಾಂತಕ್ಕೆ ಬದ್ಧಳಾದವಳು. ಹಾಗಾಗಿ ಶ್ರೀಮಾತೆಯವರ ಎಲ್ಲ ವಿಚಾರಗಳು ನಿವೇದಿತಾಗೆ ಪ್ರಿಯವಾಗುತ್ತಿದ್ದವು , ಅವರ ಬಗ್ಗೆ ಗೌರವ ಮೂಡಿಸುತ್ತಿದ್ದವು. ನಿವೇದಿತಾಳನ್ನು ಹತ್ತಿರದಿಂದ ಬಲ್ಲವರಿಗೆ ತಿಳಿದಿರುವಂತೆ ಆಕೆಯಿಂದ ಒಳ್ಳೆಯ ಸರ್ಟಿಫಿಕೇಟ್ ಪಡೆಯುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ದಾಕ್ಷಿಣ್ಯಕ್ಕೆ ಎಂದೂ ಆಕೆ ಮಣಿದವಳಲ್ಲ. ಪರಿಸರವನ್ನು ಅರ್ಥಮಾಡಿಕೊಳ್ಳುವಲ್ಲಿ, ವ್ಯಕ್ತಿತ್ವವನ್ನು ಗ್ರಹಿಸಿ ವಿಶ್ಲೇಷಿಸುವಲ್ಲಿ ನಿವೇದಿತಾ ನಿಸ್ಸೀಮಳಾಗಿದ್ದಳೆಂದೇ ಹೇಳಬಹುದು. ಒಂದು ನಿರ್ದಿಷ್ಟ ಧರ್ಮದ ಚೌಕಟ್ಟಿನಲ್ಲಿ ಎಷ್ಟೋ ವರ್ಷಗಳ ಕಾಲ ಬೆಳೆದು, ಅಲ್ಲಿಯ ಆಚಾರ ವಿಚಾರಗಳನ್ನು ಮೈಗೂಡಿಸಿಕೊಂಡವರು ಬೇರೊಂದು ಧರ್ಮದ ಪ್ರವೇಶವಾದಾಗ ಒಂದೇ ಸೂರಿನಡಿ ಬಾಳ್ವೆ ನಡೆಸುವುದು ಅಸಾಧ್ಯವೆನಿಸುವುದು ಸಹಜ. ಅಂತಹ ಒಂದು ಸಂದರ್ಭ ಶ್ರೀಮಾತೆಯವರ ಮತ್ತು ನಿವೇದಿತಾಳ ಸಂಬಂಧದಲ್ಲಿ ಒದಗಿದಾಗ ನಿವೇದಿತಾ ಅದನ್ನು ದಾಖಲಿಸುವುದರ ಮೂಲಕ ಶ್ರೀಮಾತೆಯವರ ವ್ಯಕ್ತಿತ್ವದ ಮೇಲೆ ಬೆಳಕು ಚಲ್ಲುತ್ತಾಳೆ. ''ಕಲ್ಕತ್ತೆಯಲ್ಲಿ ಶ್ರೀಮಾತೆಯವರಿದ್ದಾಗ ಎಲ್ಲರಿಗಿಂತ ಹೆಚ್ಚಾಗಿ ಅವರಿಗೆ ಮನೆಯಲ್ಲಿ ಒಬ್ಬ ಪಾಶ್ಚಾತ್ಯ ಮಹಿಳೆ ಇದ್ದುದರಿಂದ ಮನಸ್ಸಿಗೆ ಧಕ್ಕೆ ಬಂದಿದ್ದಿರಬಹುದು. ಎಂಬತ್ತು ವರುಷಗಳಿಂದ ಬಂದ ಅಭ್ಯಾಸಕ್ಕೆ ತಕ್ಷಣ ಯಾವುದೋ ಅಡಚಣೆಯಾಯಿತು, ಆದರೆ ಒಮ್ಮೆ ಅವರು ಅದರಿಂದ ಪಾರಾದ ಮೇಲೆ ಔದಾರ್ಯವೇ ರೂಪವೆತ್ತಂತಿದ್ದರು. ಯಾವಾಗಲೂ ಅವರು ಪೂರ್ವಾಚಾರ ಪರಾಯಣರೇನೋ ನಿಜ, ಆದರೆ ಎಂದಿಗೂ ಪೂರ್ವಕಲ್ಪಿತ ಅಭಿಪ್ರಾಯದವರಲ್ಲ. ದಿನಚರಿಯ ದೃಷ್ಟಿಯಿಂದ ಅವರು ತಮ್ಮ ಗಂಗಾತೀರದ ಕೋಣೆಯಲ್ಲಿದ್ದರೂ ಒಂದೇ ಅಥವಾ ತಮ್ಮ ಮನೆಯಲ್ಲಿದ್ದರೂ ಒಂದೇ.''

ಶ್ರೀಮಾತೆಯವರಿಗೂ ನಿವೇದಿತಾಳ ಬಗ್ಗೆ ಅಷ್ಟೇ ಪ್ರೀತಿ ಇತ್ತು. ಆಕೆ ಕೈಗೊಂಡಿದ್ದ ಕಾರ್ಯಗಳ ಬಗ್ಗೆ ಹೆಮ್ಮೆ, ಗೌರವವಿತ್ತು. ಸ್ತ್ರೀಶಿಕ್ಷಣದ ಬಗ್ಗೆ ಆಕೆ ತೋರಿದ್ದ ಆಸಕ್ತಿ ಅವರಿಗೆ ಮೆಚ್ಚುಗೆಯಾಗಿತ್ತು. ಇದೇ ಕಾರ್ಯನಿಮಿತ್ತ ಹಣ ಸಂಗ್ರಹಣೆಗಾಗಿ ಆಕೆ ವಿದೇಶ ಪ್ರವಾಸ ಕೈಗೊಂಡಿದ್ದಾಗ ಶ್ರೀಮಾತೆಯವರು ಅವಳಿಗೆ ಬರೆದ ಪತ್ರದಲ್ಲಿ ಈ ಎಲ್ಲಾ ಭಾವನೆಗಳು ವ್ಯಕ್ತಗೊಂಡಿವೆ. ''ಪ್ರೀತಿಯ ಮಗು ನಿವೇದಿತಾ, ನನ್ನ ಪ್ರೀತಿಯನ್ನು ಸ್ವೀಕರಿಸು. ನನ್ನ ಶಾಂತಿಗಾಗಿ ನೀನು ದೇವರನ್ನು ಪ್ರಾರ್ಥಿಸಿದ್ದನ್ನು ತಿಳಿದು ಆನಂದವಾಯಿತು. ನೀನು ಸದಾನಂದಮಯಿ ತಾಯಿಯ ಪ್ರತಿಮೂರ್ತಿ. ನನ್ನ ಹತ್ತಿರವಿರುವ ನಿನ್ನ ಫೋಟೋವನ್ನು ಆಗಾಗ್ಗೆ ನೋಡುತ್ತಿರುತ್ತೇನೆ. ನೀನು ನನ್ನೊಡನೆಯೇ ಇರುವಂತೆ ನನಗನಿಸುತ್ತದೆ. ದೇವರು ನಿನ್ನ ಮಹತ್ಕಾರ್ಯದಲ್ಲಿ ನಿನಗೆ ಸಹಾಯ ಮಾಡಲಿ ಮತ್ತು ಶಕ್ತಿಯನ್ನೂ, ಸುಖವನ್ನೂ ನೀಡಲಿ ಎಂಬುದೇ ನನ್ನ ಪ್ರಾರ್ಥನೆ....''

ಎರಡು ಮಹಾನ್ ಚೇತನಗಳ ಸಂಗಮ ನಿಜಕ್ಕೂ ಅದ್ಭುತ ಹಾಗೂ ವಿಶೇಷ. ಮಹತ್ಕಾರ್ಯದಲ್ಲಿ ತೊಡಗಿಸಿಕೊಂಡವರ ಮನದಾಳದ ಮಾತುಗಳ ಮಾಧುರ್ಯ ಅವರ ವಿಚಾರಧಾರೆಯಲ್ಲಿ ಅನಾವರಣಗೊಂಡಿದೆ. ವಿಭಿನ್ನ ಸಂಸ್ಕೃತಿ, ಧರ್ಮಗಳ, ಆಚಾರ-ವಿಚಾರಗಳನ್ನು ಗೌರವಿಸುತ್ತಲೇ ಮಾನವಧರ್ಮವನ್ನು ಎತ್ತಿ ಹಿಡಿಯಲು ಒಂದಾದ ಸ್ತ್ರೀಶಕ್ತಿಯ ಸಮಾಗಮ ರೋಚಕವೆನಿಸುತ್ತದೆ. ಅದರ ಪ್ರತಿನಿಧಿಗಳೆಂಬಂತೆ ಇವರು ಗಮನ ಸೆಳೆಯುತ್ತಾರೆ.

ಸೋದರಿ ನಿವೇದಿತಾ ಶ್ರೀಮಾತೆಯವರ ಮಾತೃಹೃದಯಕ್ಕಷ್ಟೇ ಮಾರುಹೋದವಳಲ್ಲ; ಅವರ ಅಸಾಧಾರಣ, ಅನುಪಮ ವ್ಯಕ್ತಿತ್ವಕ್ಕೆ ಶರಣಾಗಿದ್ದಳು. ತನ್ನ ಭಕ್ತಿ, ಗೌರವ, ಪ್ರೀತಿಯನ್ನು ಸಂಪೂರ್ಣವಾಗಿ ಶ್ರೀಮಾತೆಗೆ ಆಕೆ ಸಮರ್ಪಿಸಿದ್ದಳು.



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೫

''ನೆಲ ಅಂತಸ್ತು ಬಹಳ ಕಾಲದಿಂದ ವಾಸರಹಿತವಾಗಿದ್ದು, ಕಾಡು, ಗಿಡ, ಪೊದೆಗಳಿಂದ ತುಂಬಿಹೋಗಿತ್ತು. ನರಿ, ಹಾವುಗಳಿಗೆ ಒಳ್ಳೆಯ ಆವಾಸಸ್ಥಾನವಾಗಿತ್ತು. ಭಯದಿಂದಾಗಿ ಅತ್ತ ಯಾರೂ ಸುಳಿಯುತ್ತಿರಲಿಲ್ಲ. ಟಾಕಿಯ ಕ್ರೂರ ನಿರಂಕುಶ ಜಮೀನ್ದಾರರಿಂದ ಅಲ್ಲಿ ಅನೇಕ ನರಹತ್ಯೆಗಳೂ ನಡೆದಿವೆ ಎಂಬ ವದಂತಿ ಬೇರೆ ಇತ್ತು. ಆದ್ದರಿಂದ ಇದನ್ನು ಎಲ್ಲರೂ 'ಭೂತದ ಮನೆ' ಎಂದು ಕರೆಯುತ್ತಿದ್ದರು. ಯಾರೂ ಬಾಡಿಗೆಗೆ ಬರುತ್ತಿರಲಿಲ್ಲ. ಆದ್ದರಿಂದಲೇ ಮಠದವರಿಗೆ ಇದು ಕೇವಲ ೧೦ ರೂಪಾಯಿ ಬಾಡಿಗೆಗೆ ಲಭಿಸಿತ್ತು. ಮೆಟ್ಟಿಲು ಹತ್ತಿದೊಡನೆ ಎಡಗಡೆಗೆ ಇದ್ದದ್ದೇ 'ಕಾಳೀತಪಸ್ವಿ'ಯ(ಸ್ವಾಮಿ ಅಭೇದಾನಂದರ) ಕೊಠಡಿ. ನಂತರ ಒಂದೆರೆಡು ಮೆಟ್ಟಿಲು ಹತ್ತಿ ಇಳಿದರೆ, ಅದೇ ಪೂಜೆಗೆ ಅಣಿಮಾಡುವ ಕೊಠಡಿ. ಇಲ್ಲಿ ಒಂದು ಮೊಳ ಚೌಕದ ಮಣ್ಣಿನ ಹೋಮಕುಂಡವಿತ್ತು. ಈ ಕೊಠಡಿಯ ಮೂಲಕ ದೇವರ ಮನೆಗೆ ಹೋಗಬೇಕಾಗುತ್ತಿತ್ತು. ಇನ್ನೂ ಮುಂದುವರಿದರೆ ವರಾಂಡ, ಅಡಿಗೆ ಮನೆ. ಎಡಕ್ಕೆ ಒಂದು ವಿಶಾಲವಾದ ಹಜಾರ. ಇದನ್ನೇ 'ದಾನವರ ಕೊಠಡಿ' ಎಂದು ಕರೆಯುತ್ತಿದ್ದರು. ಅದರ ಪಕ್ಕಕ್ಕೆ ಊಟದಮನೆ ಹಾಗೂ ಬಚ್ಚಲು. ಮುಂದೆ ಸ್ವಲ್ಪ ಕತ್ತಲ ಮಾರ್ಗವನ್ನು ದಾಟಿದರೆ ಪಾಯಿಖಾನೆಗಳು. ಅಲ್ಲಿಂದ ಮೆಟ್ಟಿಲಿಳಿದು ಬಂದರೆ ತೋಟದ ಮೂಲಕ ಕೊಳಕ್ಕೆ ಹೋಗಬಹುದು. ಹಜಾರದ ಗೋಡೆಯಲ್ಲಿ ನಾನಾ ದೇವದೇವತೆಯರ, ಅವತಾರಪುರುಷರ ಹಾಗೂ ಶಿಲುಬೆಗೆ ಹಾಕಿದ ಕ್ರಿಸ್ತನ ಪಟಗಳನ್ನು ತೂಗುಹಾಕಲಾಗಿತ್ತು. ದೇವರ ಮನೆಯಲ್ಲಿ ಧೂಪವನ್ನು ನಿವೇದಿಸಿದ ಮೇಲೆ ಶಶಿ ಮಹಾರಾಜರು (ಸ್ವಾಮಿ ರಾಮಕೃಷ್ಣಾನಂದರು) ಧೂಪದ ಕುಣಿಕೆಯನ್ನು ಒಂದು ಕೈಯಲ್ಲಿ ಹಿಡಿದು, ಮತ್ತೊಂದು ಕೈಯಲ್ಲಿ ದೀಪವನ್ನು ಹಿಡಿದು ಈ ಪಟಗಳ ಮುಂದೆ 'ಜಯ ಗುರುದೇವ, ಜಯ ಗುರುದೇವ, ಶ್ರೀಗುರುದೇವ' ಎಂದು ಹೇಳುತ್ತಾ ಧೂಪದಾರತಿ ಮಾಡಿ ಮರಳುತ್ತಿದ್ದರು. ನಾನು ಮಠಕ್ಕೆ ಸೇರಿದ ಮೇಲೆ ಈ ಕೆಲಸವನ್ನು ನನಗೆ ಒಪ್ಪಿಸಿದರು. ಹಜಾರದ ಒಂದು ಕಡೆ ಮರದ ಮಂಚವಿತ್ತು. ಅದರ ಮೇಲೆ ಸಂಸ್ಕೃತ, ಬಂಗಾಳಿ ಹಾಗೂ ಕೆಲವು ಇಂಗ್ಲಿಷಿನ ಪುಸ್ತಕಗಳನ್ನು ಒಂದರ ಮೇಲೆ ಒಂದರಂತೆ ಜೋಡಿಸಲಾಗಿತ್ತು. ಉಳಿದ ಜಾಗದಲ್ಲಿ ತಬಲಾ, ಮೃದಂಗ, ಖೋಲ್, ತಾಳಗಳನ್ನು ಇಡಲಾಗಿತ್ತು. ಹತ್ತಿರದಲ್ಲೇ ಗೋಡೆಗೆ ತಂಬೂರಿಯನ್ನು ತಗುಲಿ ಹಾಕಲಾಗಿತ್ತು. ಈ ಹಜಾರವೇ ಸಂನ್ಯಾಸಿಗಳು ಮಲಗುವ ಸ್ಥಳವೂ ಆಗಿತ್ತು; ಭಕ್ತರನ್ನೂ ಸಂದರ್ಶಕರನ್ನೂ ಭೇಟಿಯಾಗುವ ಸ್ಥಳವೂ ಆಗಿತ್ತು. ಇವರೆಲ್ಲರ ಹಾಸಿಗೆ ಎಂದರೆ ಒಂದು ಚಾಪೆ ಹಾಗೂ ಒಂದು ಚಿಕ್ಕ ದಿಂಬು; ಇವುಗಳನ್ನು ಸಾಲಾಗಿ ಸದಾ ಹಾಸಿಡಲಾಗಿತ್ತಿತ್ತು. ಅತಿಥಿಗಳಿಗೋಸ್ಕರ ೨-೩ ಬೇರೆ ಚಾಪೆಗಳಿದ್ದವು. ಬಂದವರು ಚಾಪೆಯ ಮೇಲೆ ಇಲ್ಲವೇ ನೆಲದ ಮೇಲೆ ಕುಳಿತುಕೊಳ್ಳುತ್ತಿದ್ದರು.



ಬೇಲೂರು ಮಠದಲ್ಲಿ ಸಂನ್ಯಾಸಿಗಳೊಂದಿಗೆ ವಿರಜಾನಂದರು. (ನಿಂತವರಲ್ಲಿ ಎಡಭಾಗದಿಂದ ಮೂರನೆಯವರು.) ಚಿತ್ರದಲ್ಲಿ ಸ್ವಾಮಿ ವಿವೇಕಾನಂದ, ಶಿವಾನಂದ, ತುರೀಯಾನಂದ, ಅದ್ವೈತಾನಂದ, ತ್ರಿಗುಣಾತೀತಾನಂದ ಮೊದಲಾದವರನ್ನು ಕಾಣಬಹುದು.

''ದೇವರಮನೆಯಲ್ಲಿ ಶ್ರೀರಾಮಕೃಷ್ಣರ ಹಾಸಿಗೆಯನ್ನು ನೆಲದ ಮೇಲೆ ಹಾಸಲಾಗಿತ್ತು. ಚಾಪೆ, ಅದರ ಮೇಲೆ ಗದ್ದಿಗೆ, ದಿಂಬು, ಇವುಗಳ ಮೇಲೊಂದು ಹಾಸು; ಇದರ ಮೇಲೆ ರಾಮಕೃಷ್ಣರ ಪಟವಿತ್ತು. ಹಾಸಿಗೆಯ ಒಂದು ತುದಿಯಲ್ಲಿ ಮಣೆಯ ಮೇಲೆ ಶ್ರೀರಾಮಕೃಷ್ಣರ ಅಸ್ಥಿಯನ್ನುಳ್ಳ ತಾಮ್ರದ ಸಂಪುಟ ಹಾಗೂ ಪಾದುಕೆಗಳಿದ್ದವು. ಕೋಶಾಕುಶಿ ಹಾಗೂ ತಾಮ್ರಕುಂಡದ ಮುಂದೆ ಕುಳಿತು ನಿತ್ಯವೂ ಶಶಿ ಮಹಾರಾಜರು ಪೂಜಾದಿಗಳನ್ನು ಮಾಡುತ್ತಿದ್ದರು. ಶಶಿ ಮಹಾರಾಜರು ಮಾಡುತ್ತಿದ್ದ ಸಂಧ್ಯಾರತಿ ಎಲ್ಲರೂ ನೋಡಲೇಬೇಕಾದಂತಹ ಅಪೂರ್ವ ದೃಶ್ಯವಾಗಿತ್ತು. ಯಾವಾಗ ಅವರು ಧೂಪ, ಖೋಲ್, ಕರತಾಲವೇ ಮೊದಲಾದ ಸಂಗೀತವಾದ್ಯಗಳೊಂದಿಗೆ ಆರತಿಯ ಕೊನೆಭಾಗದಲ್ಲಿ ಚಾಮರ ಬೀಸುತ್ತಿದ್ದರೋ ಆಗ ಉನ್ಮತ್ತರಂತೆ 'ಜಯ ಗುರುದೇವ, ಶ್ರೀಗುರುದೇವ' ಎಂದು ಹೂಂಕರಿಸುತ್ತಾ ತಾಳಕ್ಕೆ ತಕ್ಕಂತೆ ನರ್ತಿಸುತ್ತಾ

ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಾಡುತ್ತಿದ್ದರು. ಆಗ ಅಲ್ಲಿದ್ದವರಲ್ಲಿ ಯಾವೊಂದು ರೀತಿಯ ಭಕ್ತಿಭಾವದ ಆವೇಶ ಉಂಟಾಗುತ್ತಿತ್ತೋ ಅದನ್ನು ಮಾತಿನಲ್ಲಿ ವರ್ಣಿಸಲಾಗದು. ಈ ಸನ್ನಿವೇಶದಿಂದಾಗಿ ಇಡೀ ಮನೆಯೇ ಕಂಪಿಸುತ್ತಿರುವಂತೆ ಭಾಸವಾಗುತ್ತಿತ್ತು. ಶಶಿ ಮಹಾರಾಜರ ಉಜ್ಜ್ವಲ ಗೌರವರ್ಣದ ಮುಖಮಂಡಲದಿಂದ ರಕ್ತವು ಚಿಮ್ಮಿ ಹೊರಬರುವುದೇನೋ ಎನಿಸುತ್ತಿತ್ತು. ಅವರು ಸಾಕ್ಷಾತ್ ಅಗ್ನಿಯೋ ಎಂಬಂತೆ ಕಾಣುತ್ತಿದ್ದರು. ಆ ಹೂಂಕಾರ, ನೃತ್ಯಗಳು ನಿಲ್ಲುವುದಿಲ್ಲವೇನೋ ಎಂದೆನಿಸುತ್ತಿತ್ತು. ಯಾರು ಖೋಲ್ (ಮೃದಂಗದಂತಹ ವಾದ್ಯ) ನುಡಿಸುತ್ತಿದ್ದರೋ ಅವರ ಕೈಯಂತೂ ಮರಗಟ್ಟಿಹೋಗುತ್ತಿತ್ತು. ಪೂಜೆಗೆ ಅಣಿ ಮಾಡುವ ಪಕ್ಕದ ಕೊಠಡಿಯಲ್ಲಿ ನಿಂತು ಆರತಿ ನೋಡುತ್ತಿದ್ದ ಇತರರೂ ಸಹ ಶಶಿ ಮಹಾರಾಜರನ್ನು ಅನುಸರಿಸಿ, 'ಜಯ ಗುರುದೇವ, ಶ್ರೀಗುರುದೇವ' ಎಂದು ಹೇಳಿಕೊಳ್ಳುತ್ತಾ ಆವೇಗದೊಂದಿಗೆ ನರ್ತಿಸುತ್ತಿದ್ದರು. ನಂತರ ಎಲ್ಲರೂ ಸಾಷ್ಟಾಂಗ ಪ್ರಣಾಮ ಮಾಡಿ, '**ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ। ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ**' ಎಂಬಿತ್ಯಾದಿ ಗುರುಗೀತೆಯ ಶ್ಲೋಕಗಳನ್ನು ಹೇಳಿ, ಕೊನೆಗೆ ಅಭೇದಾನಂದರು ರಚಿಸಿದ ಒಂದು ಸ್ತವದ ಕೊನೆಯ ಪಾದವಾದ,

''ನಿರಂಜನಂ ನಿತ್ಯಮನಂತರೂಪಂ
**ಭಕ್ತಾನುಕಂಪಾದ್ ಧೃತವಿಗ್ರಹಂ ವೈ ।**
**ಈಶಾವತಾರಂ ಪರಮೇಶಮೀಡ್ಯಂ**
**ತಂ ರಾಮಕೃಷ್ಣಂ ಶಿರಸಾ ನಮಾಮಃ ॥''**

– ಎಂದು ಹೇಳಿ, ನಂತರ 'ಜಯ್ ಶ್ರೀಗುರುಮಹಾರಾಜ್ ಜೀ ಕೀ ಜಯ್' ಎನ್ನುತ್ತಾ ಮುಕ್ತಾಯಗೊಳಿಸುತ್ತಿದ್ದರು. ಮೊದಮೊದಲು ಕಾಶೀ ವಿಶ್ವನಾಥನ ಆರತಿಯ ಗಾನವಾದ 'ಭಜ ಶಿವ ಓಂಕಾರ...' ಎಂಬ ಸ್ತವವನ್ನು ಎಲ್ಲರೂ ಖೋಲ್, ಕರತಾಲಗಳೊಂದಿಗೆ ರಾಗವಾಗಿ ಹಾಡುತ್ತಿದ್ದರು; ನಂತರ ಚಾಮರ ಬೀಸುವ ಸಮಯಕ್ಕೆ 'ಜಯ ಗುರುದೇವ, ಶ್ರೀಗುರುದೇವ' ಎಂದು ಹಾಡುತ್ತಾ ಉನ್ಮತ್ತರಾಗುತ್ತಿದ್ದರು.

''ಆಗ ಮಠದಲ್ಲಿ ಅಡುಗೆಯ ಬ್ರಾಹ್ಮಣನನ್ನು ಬಿಟ್ಟರೆ ಮತ್ತಾವ ಕೆಲಸದವರೂ ಇರಲಿಲ್ಲ. ಒಬ್ಬ 'ಭಾರೀ' (ನೀರು ಹೊರುವವ) ಮಾತ್ರ ಅಡುಗೆ ಹಾಗೂ ಕುಡಿಯುವ ನೀರನ್ನು ಗಂಗೆಯಿಂದ ಕಾವಡಿಯಲ್ಲಿ ಮಣ್ಣಿನ ಮಡಕೆಗಳನ್ನಿಟ್ಟು ಹೊತ್ತು ತರುತ್ತಿದ್ದ. ರಾಮಕೃಷ್ಣರ ಪೂಜೆ ಹಾಗೂ ಸೇವೆಗೆ ಅಣಿ ಮಾಡುವುದು, ಮಾರುಕಟ್ಟೆಗೆ ಹೋಗಿ ಬರುವುದು, ಗುಡಿಸುವುದು, ಅಡಿಗೆಗೆ ತರಕಾರಿ ಹೆಚ್ಚುವುದು, ದೇವರ ನೈವೇದ್ಯದ ಪಾತ್ರೆಗಳನ್ನು ತೊಳೆಯುವುದು, ಕೈಕಾಲು ತೊಳೆಯುವ ನೀರನ್ನು ಕೊಳದಿಂದ ತರುವುದು, ದೀಪದ ಬತ್ತಿ ಹೊಸೆಯುವುದು ಮುಂತಾದ ಎಲ್ಲ ಕೆಲಸಗಳನ್ನೂ ಸಾಮಾನ್ಯವಾಗಿ ಶಶಿಮಹಾರಾಜರೊಬ್ಬರೇ ಮಾಡಿ ಮುಗಿಸುತ್ತಿದ್ದರು. ಬೇರೆಯವರೂ ಅಲ್ಪ ಸ್ವಲ್ಪ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದರು. ಮಠಕ್ಕೆ ಸೇರಿದ ಮೇಲೆ ನಾನು ಈ ಕೆಲಸಗಳನ್ನೆಲ್ಲ ಸಾಧ್ಯವಾದಷ್ಟುಮಟ್ಟಿಗೆ ಬೆಳಗಿನಿಂದ ರಾತ್ರಿ ಮಲಗುವವರೆಗೂ ಮಾಡುತ್ತಿದ್ದೆ. ಬೆಳಗ್ಗೆ ಎದ್ದು ಹೂವು ಬಿಡಿಸುವುದು (ಗಂಗೆಯ ದಡದಲ್ಲಿದ್ದ ಒಂದು ತೋಟಕ್ಕೆ ಹೋಗುತ್ತಿದ್ದೆ. ಅಲ್ಲಿ ಒಬ್ಬ ಮಾಲಿ ಒಮ್ಮೆ ನನ್ನನ್ನು 'ನಿನಗೆ ತಿಂಗಳಿಗೆ ಎಷ್ಟು ಕೊಡುತ್ತಾರೆ?' ಎಂದು ಕೇಳಿದ. ನಾನು 'ಏನೂ ಕೊಡುವುದಿಲ್ಲ' ಎಂದು ಹೇಳಿದಾಗ ಆತನಿಗೆ ಆಶ್ಚರ್ಯವೋ ಆಶ್ಚರ್ಯ!), ಮೆಟ್ಟಿಲ ಸಮೇತ ಮಠದ ಎಲ್ಲೆಡೆ ಗುಡಿಸುವುದು, ಪೂಜೆಗೆ ಅಣಿ ಮಾಡುವುದು, ಗಂಗಾಸ್ನಾನ ಮಾಡಿಬಂದು ಗಂಧ ತೇಯುವುದು, ಪುಷ್ಪಪಾತ್ರೆಯಲ್ಲಿ ಹೂವು, ಬಿಲ್ವಪತ್ರೆ, ತುಳಸಿ, ಅರ್ಘ್ಯಾದಿಗಳನ್ನು ಜೋಡಿಸುವುದು, ಹಣ್ಣು ಕತ್ತರಿಸುವುದು, ತಾಂಬೂಲ ಸಿದ್ಧಪಡಿಸುವುದು, ಆರತಿಗೆ ಪಂಚಪ್ರದೀಪಗಳನ್ನು ಸಜ್ಜುಗೊಳಿಸುವುದು, ಬತ್ತಿ ಮಾಡುವುದು, ಠಾಕೂರರ ತಂಬಾಕು ಸಿದ್ಧಪಡಿಸುವುದು, ನೈವೇದ್ಯದ ಪಾತ್ರೆಗಳನ್ನು ತೊಳೆಯುವುದು, ಊಟಕ್ಕೆ ಎಲೆ ಹಾಕುವುದು, ನಂತರ ಆ ಜಾಗವನ್ನು ಶುಚಿಗೊಳಿಸುವುದು, ಎಲ್ಲರಿಗೂ ತಂಬಾಕು ಸಿದ್ಧಗೊಳಿಸುವುದು, ಕೈಕಾಲು ತೊಳೆಯುವ ಹಾಗೂ ಶೌಚಕ್ಕೆ ಬಳಸುವ ನೀರನ್ನು ಕೊಳದಿಂದ ಮೇಲಕ್ಕೆ ತಂದು ತುಂಬುವುದು, ರಾತ್ರಿ ಎಲ್ಲರ ಸೊಳ್ಳೆಪರದೆಗಳನ್ನು ಕಟ್ಟುವುದು, ಚಪಾತಿ ಲಟ್ಟಿಸುವುದು, ಇತ್ಯಾದಿ. ಈ ರೀತಿಯ ಸೇವೆಗಳನ್ನು ಮಾಡಲು ನನಗೆ ಬಹಳ ಆನಂದವಾಗುತ್ತಿತ್ತು. ಯಾರಾದರೂ, 'ನೀನೊಬ್ಬನೇ ಈ ಎಲ್ಲಾ ಕೆಲಸಗಳನ್ನು ಹೇಗೆ ಮಾಡುವೆ?' ಎಂದು ಹೇಳಿ ನನಗೆ ಸಹಕರಿಸಲು ಬಂದರೆ, ಬಲವಂತವಾಗಿ ಅವರ ಕೈಯಿಂದ ಕೆಲಸ ಕಿತ್ತುಕೊಳ್ಳುತ್ತಿದ್ದೆ. ಯಾವುದಾದರೂ ಕೆಲಸವನ್ನು—ಉದಾಹರಣೆಗೆ, ಪಾತ್ರೆ ತೊಳೆಯುವುದು, ನೀರು ತರುವುದು ಇತ್ಯಾದಿಗಳನ್ನು ಯಾರಾದರೂ ನಂತರ ಮಾಡುವುದಾಗಿ ಹೇಳಿ, ನನಗೆ ಮಾಡಲು ಬಿಡದಿದ್ದರೆ, ಅವರೆಲ್ಲರೂ ಊಟ ಮಾಡಿ ವಿಶ್ರಮಿಸುತ್ತಿದ್ದಾಗ ಮೆಲ್ಲನೆ ಯಾರಿಗೂ ತಿಳಿಯದಂತೆ ನಾನು ಆ ಕೆಲಸ ಮಾಡಿ ಮುಗಿಸಿಬಿಡುತ್ತಿದ್ದೆ.

''ಮಠದಲ್ಲಿ ಸಂನ್ಯಾಸಿಗಳು ಜಪ-ಧ್ಯಾನ, ಶಾಸ್ತ್ರಪಾಠ, ಚರ್ಚೆ, ಸಂಗೀತ ಹಾಗೂ ಭಜನೆಗಳಲ್ಲಿ ಬಹಳ ಹೊತ್ತನ್ನು ಕಳೆಯುತ್ತಿದ್ದರು—ಒಮ್ಮೊಮ್ಮೆ ಒಬ್ಬೊಬ್ಬರೇ; ಕೆಲವೊಮ್ಮೆ ಐದಾರು ಜನ ಸೇರಿ. ತಾರಕ್ ಮಹಾರಾಜರು ಕೆಲವೊಮ್ಮೆ ಡಗ್ಗಾವನ್ನು ಬಾರಿಸಿಕೊಂಡು ತಮ್ಮದೇ ಆದ ಭಾವದಲ್ಲಿ ಹಾಡುತ್ತಾ ನರ್ತಿಸುತ್ತಿದ್ದರು. ಅವರ ಕಂಠ ಬಹಳ ಮಧುರವಾಗಿತ್ತು. ಅಲ್ಲಿಯ ನೆರೆಹೊರೆಯವರು ಆಗ ಮಠದ ವಿರುದ್ಧವಾಗಿದ್ದರು; ಅವರ ಮೇಲೆ ನಾನಾ ಬಗೆಯ ಸುಳ್ಳು ಆರೋಪಗಳನ್ನು ಹರಡುತ್ತಿದ್ದರು. ಸಂನ್ಯಾಸಿಗಳು ಗಂಗಾಸ್ನಾನಕ್ಕೆ ಹೋದಾಗಲೆಲ್ಲಾ ತುಂಟ ಹುಡುಗರು ಮೊಣಕೈಯನ್ನು ಬಾತುಕೋಳಿಯಂತೆ ಬಗ್ಗಿಸಿ ಕ್ವೆಕ್ ಕ್ವೆಕ್ ಎಂದು ಶಬ್ದ ಮಾಡುತ್ತಾ 'ನೋಡು! ರಾಜಹಂಸಗಳೆಲ್ಲ ಹೋಗುತ್ತಿವೆ' ಎಂದು ತಮಾಷೆ ಮಾಡುತ್ತಿದ್ದರು. ಶಾರದಾ ಮಹಾರಾಜರು ತೇವ ಹಿಡಿದ ನೆಲ ಅಂತಸ್ತಿನ ಹೊರಭಾಗದ ಕೋಣೆಯಲ್ಲಿ ಒಬ್ಬರೇ ಬಾಗಿಲು ಹಾಕಿಕೊಂಡು, ಮೌನಿಯಾಗಿ ಕೆಲವು ತಿಂಗಳುಗಳನ್ನು ಸಾಧನೆ-ಭಜನೆಗಳಲ್ಲಿ ಕಳೆದಿದ್ದರು; ಆಗ ಕೇವಲ ಒಂದು ಬಾಳೆಹಣ್ಣು

ಮತ್ತು ನೀರನ್ನು ಮಾತ್ರ ಸೇವಿಸುತ್ತಿದ್ದರು. ಅವರು ಬಹಳ ಅಪರೂಪಕ್ಕೊಮ್ಮೆ ಮಾತ್ರ ನೋಡಲು ಸಿಗುತ್ತಿದ್ದರು. ದಕ್ಷ ಮಹಾರಾಜರು ಆಗಿನ್ನೂ ಹುಚ್ಚರಾಗಿರಲಿಲ್ಲ. ಬಹಳ ಸಂಸ್ಕೃತ ಓದುತ್ತಿದ್ದರು, ತರ್ಕವಿಚಾರ ಮಾಡುತ್ತಿದ್ದರು. ಮಧುರವಾದ ಕಂಠದಿಂದ ಸ್ತೋತ್ರಗಳನ್ನು ಪಠಿಸುತ್ತಿದ್ದರು. ಎಲ್ಲರೊಂದಿಗೂ ಬೆರೆಯುವ ಮಧುರ ಸ್ವಭಾವ ಅವರದಾಗಿತ್ತು .

''ಅನಂತರ ಸ್ವಲ್ಪ ಕಾಲದಲ್ಲಿ ಯೋಗಿನ್ ಮಹಾರಾಜ್(ಸ್ವಾಮಿ ಯೋಗಾನಂದರು), ಕಾಳಿ ಮಹಾರಾಜ್ (ಸ್ವಾಮಿ ಅಭೇದಾನಂದರು) ಮತ್ತು ಶರತ್ ಮಹಾರಾಜರು (ಸ್ವಾಮಿ ಶಾರದಾನಂದರು) ಪಶ್ಚಿಮ ಪ್ರಾಂತ್ಯಗಳಲ್ಲಿ ತೀರ್ಥಯಾತ್ರೆ ಮುಗಿಸಿ ಮಠಕ್ಕೆ ಹಿಂತಿರುಗಿದ್ದರು. ಕಾಳಿ ಮಹಾರಾಜರು ಅಲಹಾಬಾದಿನ ಝೂಸಿ ಎಂಬಲ್ಲಿ ಅನೇಕ ದಿನಗಳಿದ್ದು ಮಧುಕರಿ (ಭಿಕ್ಷಾಟನೆ) ಮಾಡುತ್ತಿದ್ದರು. ಅವರು ಬರುವಾಗ ವಸಂತ ಎಂಬ ೧೭–೧೮ ವಯಸ್ಸಿನ ಹುಡುಗನೊಬ್ಬನನ್ನು ಜೊತೆಯಲ್ಲಿ ಕರೆತಂದಿದ್ದರು, ಬ್ರಹ್ಮಚಾರಿಯಾಗುವನು ಎಂದು. ಕಾಳಿ ಮಹಾರಾಜರು ಕೊಠಡಿಯ ಬಾಗಿಲನ್ನು ಹಾಕಿಕೊಂಡು ತಮ್ಮ ಸಮಯದ ಬಹುಭಾಗವನ್ನು ಸಂಸ್ಕೃತ ಅಧ್ಯಯನ ಹಾಗೂ ವೇದಾಂತ ಶಾಸ್ತ್ರಗಳನ್ನು ಓದುವುದರಲ್ಲಿ ಕಳೆಯುತ್ತಿದ್ದರು. ಅವರಂತೆಯೇ ವಸಂತನಿಗೂ ಅಧ್ಯಯನದಲ್ಲಿ ಬಹಳ ಒಲವಿತ್ತು. ಕಾಳಿ ಮಹಾರಾಜರ ಬಳಿ ಅವನು ಸಂಸ್ಕೃತ ವ್ಯಾಕರಣದ 'ಲಘು ಸಿದ್ಧಾಂತ ಕೌಮುದಿ'ಯನ್ನು ಅಧ್ಯಯನ ಮಾಡುತ್ತಿದ್ದ. ಶಶಿ ಮಹಾರಾಜರು ಇದನ್ನೆಲ್ಲಾ ಹೆಚ್ಚು ಇಷ್ಟಪಡುತ್ತಿರಲಿಲ್ಲ. ಠಾಕೂರರ ಸೇವೆಯಲ್ಲಿ ಸ್ವಲ್ಪ ಕುಂದುಂಟಾದರೂ ಅವನನ್ನು ಬಹಳ ಬಯ್ಯುತ್ತಿದ್ದರು. ವಸಂತನು ಬಹಳ ಸ್ವಾಭಿಮಾನಿ. ಯಾರಿಗೂ ಏನೂ ಹೇಳದಿದ್ದರೂ ಒಳಗೊಳಗೇ ತುಂಬ ನೊಂದುಕೊಳ್ಳುತ್ತಿದ್ದ. ಹೀಗೆ ೩-೪ ತಿಂಗಳು ಕಳೆದಿರಬಹುದು, ಒಂದು ದಿನ ವಸಂತ ಹಠಾತ್ತಾಗಿ ಅದೃಶ್ಯನಾಗಿಬಿಟ್ಟ. ಅನುಕೂಲಸ್ಥರೂ, ಕುಲೀನರೂ ಆಗಿದ್ದ ಅವನ ಸಂಬಂಧಿಕರು ಎಷ್ಟು ಹುಡುಕಿದರೂ ಅವನ ಸುದ್ದಿ ಸಮಾಚಾರವೇನೂ ತಿಳಿದು ಬರಲಿಲ್ಲ. ಅವನು ತನ್ನ ಹೆತ್ತವರಿಗೆ ಒಬ್ಬನೇ ಮಗನಾಗಿದ್ದ. ಈ ಘಟನೆಯಾದ ಮೇಲೆ ಕಾಳಿ ಮಹಾರಾಜರು ಬಹಳ ಖಿನ್ನರಾಗಿ ತೀರ್ಥಯಾತ್ರೆಗೆ ದಕ್ಷಿಣಭಾರತವೇ ಮೊದಲಾದೆಡೆಗೆ ಹೊರಟು ಹೋದರು.[೧]

''ಯೋಗಿನ್ ಮಹಾರಾಜರು ಕಾಶಿಯಲ್ಲಿ ಏಕಾಂತದಲ್ಲಿದ್ದುಕೊಂಡು ಹಗಲುರಾತ್ರಿ ಕಠಿಣವಾದ ಸಾಧನೆ–ಭಜನೆಗಳಲ್ಲಿ ಮುಳಗಿದ್ದರು. ಪ್ರತಿದಿನವೂ ಮಧುಕರಿ ಮಾಡಲು ಬಹಳ ಸಮಯ ನಷ್ಟವಾಗುವುದೆಂದು, ಒಂದು ದಿನ ಮಧುಕರಿ ಮಾಡಿದ ಚಪಾತಿಗಳನ್ನು ತೆಗೆದಿಟ್ಟು, ಆ ಒಣಗಿದ ಚಪಾತಿಗಳನ್ನೇ ಮುಂದಿನ ೩-೪ ದಿನಗಳವರೆಗೂ ನೀರಿನಲ್ಲಿ ನೆನೆಸಿ ತಿನ್ನುತ್ತಿದ್ದರು. ಈ ರೀತಿಯ ಕಠೋರತೆಯಿಂದಾಗಿ ಅವರಿಗೆ ರಕ್ತ–ಆಮಶಂಕೆ ಶುರುವಾಯಿತು. ಪಥ್ಯದ ಅನುಕೂಲಕ್ಕಾಗಿ ಅನೇಕ ವೇಳೆ ಅವರು ಬಲರಾಮ ಬೋಸರ ಮನೆಯಲ್ಲಿರಬೇಕಾಗುತ್ತಿತ್ತು. ಆಗಾಗ ಮಠಕ್ಕೆ ಬರುತ್ತಿದ್ದರು. ಅವರ ಮನಸ್ಸು ಯಾವಾಗಲೂ ಧ್ಯಾನ ನಿರತವಾಗಿದ್ದು, ವೈರಾಗ್ಯದ ತೇಜಃಪುಂಜ ಮೂರ್ತಿಯಂತಿದ್ದರು. ಇವರ ವ್ಯಕ್ತಿತ್ವವು ಎಲ್ಲರನ್ನೂ ಸೆಳೆದು, ಅವರಲ್ಲಿ ಗೌರವ ಭಾವನೆಯನ್ನು ಮೂಡಿಸುತ್ತಿತ್ತು. ಅವರಿಗೆ ತಗುಲಿದ ಆ ರೋಗವು ಕೊನೆಯವರೆಗೂ ಅವರನ್ನು ಬಿಡಲಿಲ್ಲ. ಇದರಿಂದಾಗಿಯೇ ಅವರ ಶರೀರ ಬಹಳ ಹದಗೆಟ್ಟು, ಅವರು ೧೮೯೯ರ ಮಾರ್ಚ್ ೨೮ರಂದು ಮಹಾಸಮಾಧಿಯನ್ನು ಹೊಂದಿದರು.

''ಶರತ್ ಮಹಾರಾಜರೂ ಸಹ ಇವರಂತೆಯೇ ಕಾಶಿಯಲ್ಲಿ ಮಧುಕರಿ ಮಾಡುತ್ತ ಕಠೋರ ತಪಶ್ಚರ್ಯೆಯಲ್ಲಿ ಮುಳುಗಿದ್ದರು. ಇದರಿಂದಾಗಿ ಸುಮಾರು ಆರು ತಿಂಗಳು ರಕ್ತ–ಆಮಶಂಕೆಯಿಂದ ನರಳಿ ವರಾಹನಗರದ ಮಠಕ್ಕೆ ಮರಳಿದ್ದರು. ಆಗ ಅವರ ಶರೀರ ಅತ್ಯಂತ ದುರ್ಬಲವಾಗಿದ್ದು, ಬರೀ ಎಲುಬಿನ ಹಂದರವಾಗಿತ್ತು. ನಾನು ಹಲವು ಕೆಲಸಗಳ ನಡುವೆಯೂ ಸಮಯ ಮಾಡಿಕೊಂಡು ಬಂದು ಅವರ ಸೇವೆ ಮಾಡಿಹೋಗುತ್ತಿದ್ದೆ. ಒಂದು ದಿನ ನಾನು ಹೀಗೇ ಅವರ ಸೇವೆಗೆಂದು ಬಂದಾಗ, ''ಯಾರೀ ಹುಡುಗ? ಹೆತ್ತ ತಾಯಿಯಂತೆ ನನ್ನ ಸೇವೆ ಮಾಡುತ್ತಿರುವನಲ್ಲಾ!'' ಎಂದು ಉದ್ಗರಿಸಿದ್ದರು. ಕ್ರಮೇಣ ಅವರು ಗುಣಮುಖರಾದರು. ತಂಬೂರಿ ಹಿಡಿದು ತಮ್ಮ ಸುಶ್ರಾವ್ಯ ಕಂಠದಿಂದ ಮಧುರವಾಗಿ ಹಾಡುತ್ತಿದ್ದರು. ಯಾರಾದರೊಬ್ಬರು ಹಾಡಿಗೆ ತಬಲಾ ನುಡಿಸುತ್ತಿದ್ದರು. ಉಳಿದವರು ಜೊತೆಗೂಡಿ ಹಾಡುತ್ತಿದ್ದರು, ಇಲ್ಲವೇ ಕೇಳುತ್ತಿದ್ದರು.

''ಎಲ್ಲರೂ ಆಗ ಸಾಲವೃಕ್ಷದ ಎಲೆಯಲ್ಲಿ ಊಟ ಮಾಡುತ್ತಿದ್ದರು. ನಂತರ ಆ ಎಲೆಗಳನ್ನು ಊಟದ ಮನೆಯ ಮುರಿದ ಕಿಟಕಿಯಿಂದ ತೂರಿಸಿ ಕೆಳಗೆಸೆಯುತ್ತಿದ್ದರು. ನರಿಗಳು ಬಂದು ಉಳಿದಿರಬಹುದಾದ ಒಂದೆರಡು ಅಗುಳಿಗಾಗಿ ಎಲೆಯನ್ನು ಎಳೆದಾಡುತ್ತಿದ್ದವು. ತಾರಕ್ ಮಹಾರಾಜರು (ಸ್ವಾಮಿ ಶಿವಾನಂದರು) ಅವುಗಳಿಗಾಗಿ ಚಪಾತಿಯನ್ನು ಎತ್ತಿಡುತ್ತಿದ್ದರು. 'ಬಾ, ಬಾ' ಎಂದು ಪ್ರೀತಿಯಿಂದ ಕರೆದು ಚಪಾತಿಯ ತುಂಡುಗಳನ್ನು ಮೇಲಿನಿಂದ ಹಾಕುತ್ತಿದ್ದರು. ಅವುಗಳು ಅದನ್ನು ಆತುರದಿಂದ ತಿನ್ನುವುದನ್ನು ನೋಡಿ ಸಂತೋಷಪಡುತ್ತಿದ್ದರು.

''ಮಠಕ್ಕೆ ಪ್ರಾರಂಭದಿಂದಲೂ ಯೋಗೇನ್ ಚಟರ್ಜಿ ಎಂಬ ನೆರೆಯ ವಯಸ್ಕರೊಬ್ಬರು ಬಂದು ಹೋಗುತ್ತಿದ್ದರು. ಇವರಿಗೆ ಪಿತ್ರಾರ್ಜಿತವಾದ ಆಸ್ತಿಯಿತ್ತು. ಈತ ಬಹಳ ಉದಾರಿಯೂ, ವಿನೋದಶೀಲರೂ, ವಾಚಾಳಿಯೂ ಆಗಿದ್ದು, ಇವರ ಮಾತುಕತೆ

೧ ಅವರು ಸುಮಾರು ಎರಡು ವರ್ಷಗಳ ಕಾಲ ನಾನಾ ತೀರ್ಥಕ್ಷೇತ್ರಗಳ ಪರ್ಯಟನೆ ಮಾಡಿ, ನಂತರ ಆಲಂಬಜಾರಿನ ಮಠಕ್ಕೆ ಹಿಂದಿರುಗಿದ್ದರು. ಇದರಿಂದ ಎಲ್ಲರೂ ಸಂತಸಗೊಂಡು, ''ಚಾರ್‌ಧಾಮ್ ಕರ್‌ಕೇ ಸಾಧು ಆಯಾ ಹೈ'' (ಚತುರ್ಧಾಮಗಳ ದರ್ಶನ ಮಾಡಿ ಸಾಧು ಮರಳಿ ಬಂದಿದ್ದಾರೆ) ಎನ್ನುತ್ತಿದ್ದರು. ಆಗಿನಿಂದ ಅವರು ಎಲ್ಲರೊಂದಿಗೂ ಬೆರೆಯುತ್ತಿದ್ದರು. ಅವರಿಗೆ ಹಾಡಲು, ವಾದ್ಯಗಳನ್ನು ನುಡಿಸಲು ಬರುತ್ತಿತ್ತು. ಮುಂದೆ ಸ್ವಾಮಿ ವಿವೇಕಾನಂದರು ಅಮೆರಿಕದಲ್ಲಿ ಪ್ರಸಿದ್ಧರಾದಾಗ ಕಲ್ಕತ್ತದ ಪುರಜನರ ಪರವಾಗಿ ಅಮೆರಿಕಾ ಜನತೆಗೆ ಧನ್ಯವಾದಗಳನ್ನು ಅರ್ಪಿಸಲು ೧೮೯೪ರಲ್ಲಿ ಟೌನ್‌ಹಾಲಿನಲ್ಲಿ ಬಹಳ ದೊಡ್ಡ ಸಭೆ ಸೇರಿತು. ಈ ಸಭೆಯ ಯಶಸ್ಸಿಗಾಗಿ ಕಲ್ಕತ್ತೆಯ ಆಗಿನ ಪ್ರಸಿದ್ಧ ನಾಯಕರ ಸಹಾಯ, ಸಹಕಾರ ಗಳಿಸಲು ಕಾಳಿ ಮಹಾರಾಜರು ಹಗಲು, ರಾತ್ರಿ ದುಡಿದಿದ್ದರು.

ಬಹಳ ಸ್ವಾರಸ್ಯಕರವಾಗಿರುತ್ತಿತ್ತು. ಅವರು ತಿನ್ನಲು ಹಾಗೂ ತಿನ್ನಿಸಲು ಬಹಳ ಉತ್ಸುಕರಾಗಿರುತ್ತಿದ್ದರು. ಜನರು 'ತಿಂದು ತಿಂದೇ ಇವರ ಹಣ ಕರಗಿ ಹೋಗಿದೆ' ಎಂದು ಆಡಿಕೊಳ್ಳುತ್ತಿದ್ದರು. ಮೊದಮೊದಲು ಮಠದಲ್ಲಿ ಊಟಕ್ಕೂ ಅಭಾವವಿತ್ತು. ಇದನ್ನು ತಿಳಿದ ತಕ್ಷಣ, ಈತ ತಾನೇ ಸ್ವತಃ ಮಾರುಕಟ್ಟೆಗೆ ಹೋಗಿ ಸಾಮಾನನ್ನು ಖರೀದಿಸಿ ಮಠಕ್ಕೆ ತಲುಪಿಸುತ್ತಿದ್ದರು. ಇವರಿಗೆ ಸಂತಾನವಿಲ್ಲದ ಕಾರಣ, ಪತ್ನೀವಿಯೋಗವಾದ ನಂತರ ನಿರಾತಂಕವಾಗಿ ಕಾಶಿಯಲ್ಲಿ ವಾಸಿಸುತ್ತಿದ್ದರು. ೧೮೯೭ರಲ್ಲಿ ಸ್ವಾಮೀಜಿಯವರು ಪಾಶ್ಚಾತ್ಯ ದೇಶಗಳಿಂದ ಹಿಂತಿರುಗಿದಾಗ ಅವರಿಂದ ಸಂನ್ಯಾಸ ದೀಕ್ಷೆಯನ್ನು ಪಡೆದು, ಸ್ವಾಮಿ ನಿತ್ಯಾನಂದರಾದರು.

''ಅಲ್ಲಿಯ ಸ್ಥಳೀಯರೂ, ಸ್ವಾಮೀಜಿಯ ಸಹಪಾಠಿಗಳೂ ಆದ ಸಾತು (ಸಾತ್‌ಕೊಡಿ ಲಾಹಿರಿ) ಹಾಗೂ ದಾಸು (ದಾಶರಥಿ ಸನ್ಯಾಲ್, ಮುಂದೆ ಆಲೀಪುರ ನ್ಯಾಯಾಲಯದ ಹೆಸರುವಾಸಿ ವಕೀಲ) ಇವರುಗಳು ಆಗಾಗ ಮಠಕ್ಕೆ ಬರುತ್ತಿದ್ದರು. ಅಂತೆಯೇ ಭುವನ್ ಹಾಗೂ ಬರಾಲ್ ಇವರೂ ಸಹ ಮಠಕ್ಕೆ ಹೆಚ್ಚಾಗಿ ಬರುತ್ತಿದ್ದರು. ಬರಾಲ್ ದಿನವೂ ಬೆಳಗ್ಗೆ ಒಂದೆರಡು ಗಂಟೆಗಳ ಕಾಲ ಮಠದಲ್ಲಿದ್ದು ಮಾರುಕಟ್ಟೆಗೆ ಹೋಗಿಬರುವುದು, ನೀರು ತುಂಬುವುದು ಇತ್ಯಾದಿ ಕೆಲಸಗಳನ್ನು ಬಹಳ ತತ್ಪರತೆಯಿಂದ ಮಾಡಿಕೊಟ್ಟು ಹೋಗುತ್ತಿದ್ದ.

''ನಾವು ಮನೆಯಿಂದ ಮಠಕ್ಕೆ ಹೋಗಿಬರುತ್ತಿದ್ದ ಸಮಯದಲ್ಲೇ ಅಥವಾ ಕೆಲವು ದಿನಗಳ ನಂತರದಲ್ಲಿ ಅಹಿರಿಟೊಲಾದಿಂದ ಮತ್ತೊಂದು ಗುಂಪು ಮಠಕ್ಕೆ ಬಂದುಹೋಗುತ್ತಿತ್ತು. ನಮ್ಮದು ಕಾಲೇಜು ಗುಂಪಾದರೆ ಅವರದ್ದು ಶಾಲೆಯ ಗುಂಪು! ಅವರಲ್ಲಿ ನಿವಾರಣ (ದತ್ತ), ಕಾನಾಯ್ (ಮುಂದೆ ಸ್ವಾಮಿ ನಿರ್ಭಯಾನಂದ), ನಂದ, ಚಂದ್ರ, ಕೃಷ್ಣಲಾಲ್ (ಮುಂದೆ ಸ್ವಾಮಿ ಧೀರಾನಂದ) ಮುಂತಾದವರಿದ್ದರು.[೨]

''ನಾನು ನೋಡಿದಂತೆ ಆಗ ಮಠಕ್ಕೆ ಬರುತ್ತಿದ್ದ ಯುವಕರೆಲ್ಲರ ಗುರಿ ಮಠಕ್ಕೆ ಯಾವುದಾದರೊಂದು ರೀತಿಯಲ್ಲಿ ಸೇವೆ ಸಲ್ಲಿಸುವುದೇ ಆಗಿತ್ತು. ಎಲ್ಲಿ ಏನು ಕೆಲಸ ಉಳಿದಿದೆ ಎಂದು ಹುಡುಕಿ ನೋಡಿ ಅದನ್ನು ಉತ್ಸಾಹದಿಂದ ಮಾಡಿ ಮುಗಿಸುತ್ತಿದ್ದರು. ಯಾರು ಎಷ್ಟು ಹೆಚ್ಚು ಕೆಲಸ ಮಾಡುತ್ತಿದ್ದರೋ ಅವರಿಗೆ ಅಷ್ಟು ಹೆಚ್ಚು ಆನಂದವಾಗುತ್ತಿತ್ತು. ಶಶಿ ಮಹಾರಾಜರೇ ಅವರಿಗೆಲ್ಲಾ ಜ್ವಲಂತ ಉದಾಹರಣೆಯಾಗಿದ್ದರು. ಅನೇಕ ಮಂದಿ ಹಳೆಯ ಗೃಹೀ ಭಕ್ತರೂ ಹಾಗೆಯೇ ಮಾಡುತ್ತಿದ್ದರು. ತಮ್ಮಿಂದ ಸಾಧ್ಯವಾದಷ್ಟು ಸಹಾಯ ಮಾಡಿ ಮಠದ ಸಂನ್ಯಾಸಿಗಳ ಶ್ರಮವನ್ನು ಕಡಿಮೆ ಮಾಡಲು ಯತ್ನಿಸುತ್ತಿದ್ದರು.

''ಮಾಸ್ಟರ್ ಮಹಾಶಯರು ರಜೆಯ ದಿನಗಳಲ್ಲಿ ಆಗಾಗ ಬಂದು ೨-೩ ದಿನಗಳನ್ನು ಮಠದಲ್ಲಿ ಕಳೆಯುತ್ತಿದ್ದರು. ಕೆಲವೊಮ್ಮೆ ದಕ್ಷಿಣೇಶ್ವರಕ್ಕೆ ಹೋಗಿ ಅಲ್ಲಿ ಪಂಚವಟಿ ಹಾಗೂ ಬಿಲ್ವ ಮರದಡಿ ಏಕಾಂತವಾಗಿ ಸಾಧನೆ ಮಾಡುತ್ತಿದ್ದರು.

''ಶ್ರೀರಾಮಕೃಷ್ಣರು ಉಪಯೋಗಿಸುತ್ತಿದ್ದ ಬಟ್ಟೆಬರೆಯೇ ಮೊದಲಾದ ಕೆಲವು ಸಾಮಗ್ರಿಗಳನ್ನು ಒಂದು ಟ್ರಂಕಿನಲ್ಲಿಟ್ಟು ಬೀಗ ಹಾಕಲಾಗಿತ್ತು. ಅದನ್ನು ಮತ್ತಷ್ಟು ಜೋಪಾನಪಡಿಸಲು ಒಂದು ಮರದ ಚೌಕಟ್ಟಿಗೆ ಅಳವಡಿಸಲಾಗಿತ್ತು.[೩] ಇದ್ದಂತಹ ಒಂದೆರಡು ಬಟ್ಟೆಗಳನ್ನೇ ಎಲ್ಲರ ಬಳಕೆಗಾಗಿ ಒಂದು ದಾರದ ಮೇಲೆ ನೇತು ಹಾಕಲಾಗುತ್ತಿತ್ತು; ಅದಕ್ಕಾಗಿ ಪೆಟ್ಟಿಗೆಯೂ ಇರಲಿಲ್ಲ. ಹೊರಗಡೆ ಹೋಗುವಾಗ ಮಾತ್ರ ಆ ಬಟ್ಟೆಗಳನ್ನು ಧರಿಸುತ್ತಿದ್ದರು. ಮಠದಲ್ಲಿರುವಾಗ ಅನೇಕರು ಬರೀ ಕೌಪೀನವನ್ನಷ್ಟೇ ಧರಿಸುತ್ತಿದ್ದರು. ತಿಂಗಳಿಗೊಮ್ಮೆ ಕ್ಷೌರ ಮಾಡಿಕೊಳ್ಳುತ್ತಿದ್ದರು.

''ಉಗ್ರಾಣದ ಅಕ್ಕಿ-ಬೇಳೆ ಇತ್ಯಾದಿಗಳನ್ನು ಮಣ್ಣಿನ ಗುಡಾರ, ಮಡಕೆ, ಕುಡಿಕೆಗಳಲ್ಲಿ ಹಾಕಿಟ್ಟು ಒಂದರ ಮೇಲೊಂದರಂತೆ ಜೋಡಿಸಿಡಲಾಗಿತ್ತು. ಇರುತ್ತಿದ್ದ ಒಂದೆರಡು ರೂಪಾಯಿ ಚಿಲ್ಲರೆ ಹಾಗೂ ಪುಡಿಗಾಸುಗಳನ್ನು ಶ್ರೀರಾಮಕೃಷ್ಣರ ವಸ್ತುಗಳನ್ನಿಟ್ಟ ಆ ಪೆಟ್ಟಿಗೆಯ ಚೌಕಟ್ಟಿನ ಬಳಿ, ನೆಲದ ಮೇಲೆಯೇ ಇಡಲಾಗುತ್ತಿತ್ತು. ಅಗತ್ಯ ಬಿದ್ದಾಗ ಅಲ್ಲಿಂದ ಹಣ ತೆಗೆದುಕೊಂಡು ಬೇಕಾದ ಸಾಮಾನು ತರುತ್ತಿದ್ದರು; ಅದರ ಲೆಕ್ಕವಿಡುವ ಬಾಬತ್ತೇನೂ ಇರಲಿಲ್ಲ. ನಾನು ಸೇರುವ ಮುನ್ನ ಯುವಕನೊಬ್ಬ ಬ್ರಹ್ಮಚಾರಿಯಂತೆ ಮಠದಲ್ಲಿದ್ದು, ಒಂದು ದಿನ ಈ ಬಿಡಿಗಾಸುಗಳನ್ನೇ ತೆಗೆದುಕೊಂಡು ಪರಾರಿಯಾಗಿದ್ದನಂತೆ!

''ಶ್ರೀರಾಮಕೃಷ್ಣರ ಎರಡು ಹೊತ್ತಿನ ಉಪಾಹಾರಕ್ಕೆ ಹಾಗೂ ಎರಡು ಬಾರಿಯ ನೈವೇದ್ಯಕ್ಕಾಗಿ ದಿನಕ್ಕೆ ೮ ತಾಂಬೂಲಗಳನ್ನು ಮಾಡಲಾಗುತ್ತಿತ್ತು. ಚಹಾಪಾನ ಚಾಲ್ತಿಯಲ್ಲಿರಲಿಲ್ಲ; ಆದರೆ ಯಾರಾದರೂ ಮಲೇರಿಯಾ ಅಥವಾ ನೆಗಡಿಯಿಂದ ಕಷ್ಟಪಡುತ್ತಿದ್ದರೆ ಆಗ ಮಾತ್ರ ಚಹಾ ಕುಡಿಯುತ್ತಿದ್ದರು. ಮುಂದೆ ಆಲಮ್ ಬಜಾರಿನಲ್ಲಿ ಚಹಾ ಚಾಲ್ತಿಗೆ ಬಂತು. ಉಪನ್ಯಾಸ ಮಾಡುವುದನ್ನು ಮಠದವರಾರೂ ಸಹಿಸುತ್ತಿರಲಿಲ್ಲ. ಆದ್ದರಿಂದಲೇ, ಶ್ರೀರಾಮಕೃಷ್ಣರನ್ನು ಅವತಾರಪುರುಷರೆಂದು ಉಪನ್ಯಾಸಗಳ ಮೂಲಕ ಸಾರುತ್ತ ಪ್ರಚಾರ ಮಾಡುತ್ತಿದ್ದ ರಾಮಬಾಬುವಿನ ಮೇಲೆ ಅವರೆಲ್ಲ ಅಸಮಾಧಾನಗೊಂಡಿದ್ದರು.

*(ಮುಂದುವರಿಯುವುದು)*

---

೨ ಆಲಂಬಜಾರಿನಲ್ಲಿ ಮಠವಿದ್ದಾಗ ನಂದನು ಅದಕ್ಕೆ ಸೇರಿದ್ದ. ಸ್ವಾಮೀಜಿಯವರ ಕಾಲಾನಂತರ ಯಾವುದೋ ಒಂದು ಸಣ್ಣ ವಿಷಯಕ್ಕೆ ಮಠದವರ ಮೇಲೆ ಕೋಪಿಸಿಕೊಂಡು ಅವನು ಮನೆಗೆ ಹೊರಟುಹೋದ. ಅವನನ್ನು ಬಹಳ ಅನುನಯದಿಂದ ಕರೆದರೂ, ಅವನು ಮಠಕ್ಕೆ ಹಿಂದಿರುಗಲಿಲ್ಲ. ಅವನು ಅವಿವಾಹಿತನಾಗಿದ್ದು, ಶ್ರೀರಾಮಕೃಷ್ಣರ ನಾಮಸ್ಮರಣೆಯಲ್ಲೇ ತನ್ನ ಉಳಿದ ಜೀವನವನ್ನೆಲ್ಲ ಕಳೆದ.

ಚಂದ್ರ (ಚಂದ್ರಶೇಖರ ಚಟ್ಟೋಪಾಧ್ಯಾಯ) ಲಾಟು ಮಹಾರಾಜರ ಸತ್ಸಂಗ ಬಹಳಷ್ಟು ಮಾಡಿದ್ದ; ೧೯೪೦ರಲ್ಲಿ 'ಲಾಟು ಮಹಾರಾಜೇರ್ ಸ್ಮೃತಿಕಥಾ' ಎಂಬ ಪುಸ್ತಕವನ್ನು ಪ್ರಕಟಿಸಿದ.

ನಿವಾರಣ ಎಂಬವನು ಶ್ರೀರಾಮಕೃಷ್ಣರ ಬಗ್ಗೆ ಹೊಸ ಹೊಸ ಹಾಡುಗಳನ್ನು ರಚಿಸುತ್ತಿದ್ದ. ತನ್ನ ಜೊತೆಗಾರರೊಂದಿಗೆ ಮಠಕ್ಕೆ ಬಂದು, ಖೋಲ್-ಕರತಾಳ ವಾದ್ಯಗಳೊಂದಿಗೆ ಕೀರ್ತನೆ ಮಾಡುತ್ತಿದ್ದ. ಅವನೊಂದಿಗೆ ಶಶಿ ಮಹಾರಾಜರೂ ಹಾಡುತ್ತಿದ್ದರು.

೩. ಶ್ರೀರಾಮಕೃಷ್ಣರ ಶರೀರ ತ್ಯಾಗದ ನಂತರ ಅವರ ಕೆಲವು ವಸ್ತ್ರ ಹಾಗೂ ಅವರು ಉಪಯೋಗಿಸಿದ ಸಾಮಾನುಗಳನ್ನು ತಾತ್ಕಾಲಿಕವಾಗಿ ಬಲರಾಮ ಬಸುವಿನ ಮನೆ ಯಲ್ಲಿ ಇಡಲಾಗಿತ್ತು. ನಂತರ ಅವು ಆಲಂಬಜಾರ್ ಮಠದಲ್ಲಿತ್ತು. ಕೆಲವು ಕಾಲದ ನಂತರ ನೋಡಿದಾಗ ಅವುಗಳಲ್ಲಿ ಕೆಲವು ವಸ್ತುಗಳು ಮಾಯವಾಗಿದ್ದವು. ಇದು ಕೆಲಸದವರ ಕಿಡಿಗೇಡಿತನವಾಗಿತ್ತು .




# ಸೌಂದರ್ಯಾಮೃತಮ್

'ಅನಾದಿ ಕಾಲದಿಂದ ಸಹಜವಾಗಿ ಸರಿಯುತ್ತ ಹರಿಯುತ್ತ ಸಾಗುತ್ತಿರುವ ಈ ಸಂಸಾರದ ಲಕ್ಷ್ಯವಾದರೂ ಏನಿರಬಹುದು?' ಎಂದು ಅನೇಕ ಜ್ಞಾನ-ವಿಜ್ಞಾನ ಸಂಪನ್ನರು ಚಿಂತಿಸಿರುವರು; ಮತ್ತು ಮಹಾಗುರುವಿನ ಆಶ್ರಯವನ್ನು ಹೊಂದಿ ಸಂಸಾರದ ಪಾರವನ್ನು ತಿಳಿದು ಗುರಿ ಸೇರಿರುವರು.

**ಯಥಾ ನದ್ಯಃ ಸ್ಯಂದಮಾನಾಃ**
**ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ।**
**ತಥಾ ವಿದ್ವಾನ್ ನಾಮರೂಪಾಧ್ಯಾಮುಕ್ತಃ**
**ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥** *(ಮುಂಡಕ, ೩.೨.೮)*

ಹರಿಯುವುದನ್ನೇ ಸ್ವಭಾವವಾಗಿ ಹೊಂದಿರುವ ನದಿಗಳು ತಮ್ಮ ಗುರಿಯಾದ ಸಾಗರದೆಡೆಗೆ ಸರಿಯುತ್ತಲೇ ಹೋಗುತ್ತವೆ. ಹಾಗೆ ಸಾಗುವಾಗ ಅವು ಮಧ್ಯದಲ್ಲಿ ಉಂಟಾಗುವ ಯಾವ ಅಡಚಣೆಯನ್ನೂ ಗಣನೆಗೆ ತಂದುಕೊಳ್ಳುವುದಿಲ್ಲ. ಹಾಗೆಯೇ ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಸಂಚರಿಸುತ್ತಿರುವ ಜೀವಿಗೆ ತನ್ನ ಮೂಲಭೂತವಾದ ಸಚ್ಚಿದಾನಂದ ಸ್ವರೂಪವನ್ನು ಹೊಂದುವುದೇ ಪರಮ ಲಕ್ಷ್ಯ - ಎಂದು ಅನುಭವಿಗಳು ಘೋಷಿಸಿದ್ದಾರೆ. ಹಾಗೆ ಜೀವಿ ತನ್ನ ಮೂಲದೆಡೆಗೆ ಸಾಗುವಾಗ ಲೌಕಿಕ ಸುಖ ಭೋಗಾಭಿಲಾಷೆ ಮೊದಲಾದವು ಅದರ ಗತಿಗೆ ಪ್ರತಿಬಂಧಕಗಳನ್ನೊಡ್ಡುತ್ತವೆ ಎಂಬುದನ್ನು ಅವರು ಗಮನಿಸಿದ್ದಾರೆ. ಇಂತಹ ಪ್ರತಿಬಂಧಕಗಳ ಸೆರೆಯಲ್ಲಿ ಸಿಲುಕಿ ನಲುಗಿ ಹೋಗುತ್ತಿರುವ ಜೀವಿಗಳ ಉದ್ಧಾರಕ್ಕಾಗಿ, ಗುರುಕರುಣೆಯಿಂದ ಸಂಸಾರದ ಮರ್ಮವರಿತು ಅದರ ಪಾರ ಸೇರಿದ ಆ ಜ್ಞಾನ ಚಕ್ಷುಗಳುಳ್ಳ ಮಹರ್ಷಿಗಳು ಅನುಭವಿಗಳು-ಸ್ವಾಧ್ಯಾಯ, ವ್ರತ, ಹೋಮ ಮೊದಲಾದವನ್ನು ಸಾಧನವಾಗಿ ಕರುಣಿಸಿದ್ದಾರೆ. ಅಂತಹ ಸಾಧನಗಳಲ್ಲಿ ಸ್ತೋತ್ರಗಳು ವಿಶಿಷ್ಟ ಸ್ಥಾನವನ್ನು ಗಳಿಸುತ್ತವೆ. ಹಾಗಾಗಿ ಸಾಹಿತ್ಯ ಕ್ಷೇತ್ರದಲ್ಲಿ 'ಸ್ತೋತ್ರ ಸಾಹಿತ್ಯ' ಪ್ರಕಾರವು ವಿಪುಲವಾಗಿ ಬೆಳೆದಿದೆ.

ಈ ಸಾಲಿನಲ್ಲಿ ಶ್ರೀಶಂಕರಾಚಾರ್ಯವಿರಚಿತ ಎಂದು ಹೇಳಲಾಗುವ 'ಸೌಂದರ್ಯಲಹರೀ' ಸ್ತೋತ್ರವು ಆತ್ಮಾನಂದದಲ್ಲಿ ಮುಳುಗಲಪೇಕ್ಷಿಸುವವರಿಗೆ ತಂತ್ರಶಾಸ್ತ್ರ ಸಾರಸರ್ವಸ್ವರೂಪವಾಗಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. 'ಸುಷ್ಠು ಉನತ್ತಿ - ಆರ್ದ್ರೀಕರೋತಿ ಚಿತ್ತಂ' - ಚಿತ್ತವನ್ನು ಮೃದುಮಧುರವಾದ ಭಾವದಿಂದ ದ್ರವೀಕರಿಸಿ ಪರತತ್ತ್ವದ (ಮೂಲವಸ್ತುವಿನ) ಆಕಾರವನ್ನೇ ತಳೆಯುವಂತೆ ಮಾಡುವುದು 'ಸುಂದರ' ಎಂಬ ಪದದ ಅರ್ಥ. ಅದರ ಭಾವ ಸೌಂದರ್ಯ. ಈ ಭಾವ ಉನ್ಮಾದ, ಜೀವಿಯನ್ನು ದೇವಿಯಲ್ಲಿ ಲೀನವಾಗಿಸಿ, ಉಪರಮಿಸುವುದು. ಆದುದರಿಂದಲೇ ಇದು ಸೌಮ್ಯ(ಪ್ರಸನ್ನ)ವೂ, ರಮಣೀಯವೂ (ಆನಂದದಾಯಕವೂ) ಮಂಗಳ (ಭದ್ರ) ಆತ್ಮಕವೂ ಆಗಿದೆ. ('ಸುಂದರ' ಪದಕ್ಕೆ ಈ ಎಲ್ಲಾ ಅರ್ಥಗಳಿವೆ.)

**ಶಿವಶಕ್ತಿ ಸ್ವರೂಪೇಯಂ ಮಹಾತ್ರಿಪುರಸುಂದರೀ।**
**ಸಾಕ್ಷಾತ್ ಕಾಮದುಘಾ ನೃಣಾಂ ಜ್ಞಾನದಾ ಮುಕ್ತಿದಾಯಿನೀ ॥**

ಎಂಬ ತ್ರಿಪುರಾಸಿದ್ಧಾಂತದ ಮಾತು ಈ ವಿಚಾರವನ್ನು ಪುಷ್ಟಿಗೊಳಿಸುತ್ತದೆ. ನಿರಾಕಾರಳಾದ ದೇವಿ (ಶಕ್ತಿ)ಯು ತನ್ನ ಜೀವಿಗಳನ್ನು ಅನುಗ್ರಹಿಸುವುದಕ್ಕಾಗಿ ಆಕಾರ ತಳೆದಿದ್ದಾಳೆ. ಆದರೆ ಇದು 'ಪರಾಕ್ರಮಿ' ಯಲ್ಲಿರುವ ಪರಾಕ್ರಮದಂತೆ ಮಾತಿಗೆ ನಿಲುಕದ್ದು. ಅವ್ಯಕ್ತವಾದುದು, ಹೊರ ಆಕಾರವು ಒಳತತ್ತ್ವ(ಆಕಾರ)ದ ಕಡೆಗೆ ಒಯ್ಯುವ ಸಾಧನ ಮಾತ್ರವಷ್ಟೇ. ಅಂತೆಯೇ ಈ ಸ್ತೋತ್ರದ ಮಾತುಗಳೂ ತಾಯಿಯಲ್ಲಿ ಜೀವಿಯನ್ನು ಒಯ್ದು ನಿಲ್ಲಿಸುವ ಸಾಧನಗಳು.

ಡಾ. ಶ್ರೀಮತಿಯವರು ತಮ್ಮ **'ಸೌಂದರ್ಯಾಮೃತಮ್'** ಕೃತಿಯಲ್ಲಿ ಈ ಸ್ತೋತ್ರಕ್ಕೆ ಸರಳವಾದ ತಿಳಿಯಾದ ಅರ್ಥವಿವರಣೆ ನೀಡುವ ಪ್ರಯತ್ನ ಮಾಡಿದ್ದಾರೆ. ಅಗತ್ಯವಿರುವೆಡೆ, ಸೂಕ್ತ ಆಧಾರಗಳೊಡನೆ, ಸ್ವಲ್ಪ ವಿಸ್ತಾರವಾದ ವಿವರಣೆಯನ್ನೂ ನೀಡಿದ್ದಾರೆ. ಉದಾಹರಣೆಗೆ ೧೧ನೇ ಶ್ಲೋಕದಲ್ಲಿ ಶ್ರೀ ಚಕ್ರದ ನವಾವರಣಗಳೂ, ಅದರ ಬಗೆಗಳೂ, ಆ ಚಕ್ರದಲ್ಲಿ ನಿರ್ದಿಷ್ಟಸ್ಥಾನಗಳಲ್ಲಿ ವಾಸಿಸುವ ವಶಿನ್ಯಾದಿ ದೇವತೆಗಳು, ಮೊದಲಾದ ವಿವರಣೆ ನೀಡಿದ್ದಾರೆ. ೩೨ನೆಯ ಶ್ಲೋಕ ಅರ್ಥವನ್ನು ವಿವರಿಸುತ್ತಾ ತಾಯಿ ಸ್ವರೂಪದ ಮರ್ಮವನ್ನು ಬೋಧಿಸುವ ಷೋಡಶಾಕ್ಷರ(೧೬ ಅಕ್ಷರ)ಗಳ ತತ್ತ್ವವನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ಶ್ಲೋಕ ೭೫ ರಲ್ಲಿ ಶ್ರೀಶಂಕರರ ಜೀವನಕ್ಕೆ ಸಂಬಂಧಿಸಿದ ಐತಿಹ್ಯವನ್ನೂ, ಶ್ಲೋಕ ೮೩ರಲ್ಲಿ ತಾಯಿಯ ಮೃದುವಾದ, ಕರುಣೆಯ ಕುರಿತಾದ ಭಾವಪೂರ್ಣವಾದ ವಿವರಣೆ ನೀಡಿದ್ದಾರೆ. ಶ್ಲೋಕ ೯೮ರಲ್ಲಿ 'ಮಾಯಾ' ಶಬ್ದದ ವ್ಯುತ್ಪತ್ತಿಯನ್ನೂ ಆ ಪದದ ವಿವಿಧ ಅರ್ಥಗಳ ವಿಶ್ಲೇಷಣೆಯನ್ನೂ ನಿರುಕ್ತ, ವರಾಹ ಪುರಾಣ ಮೊದಲಾದ ಶಾಸ್ತ್ರಗ್ರಂಥಗಳ ಆಧಾರದಲ್ಲಿ ಮಾಡಿದ್ದಾರೆ.

ಪ್ರತಿ ಶ್ಲೋಕಗಳ ಅಡಿಯಲ್ಲಿ ಯಂತ್ರಗಳ ರೇಖಾಚಿತ್ರಗಳನ್ನೂ ಅವುಗಳನ್ನೂ ಆರಾಧಿಸಬೇಕಾದ ಕ್ರಮಗಳನ್ನೂ ಕೊಡಲಾಗಿದೆ. ಆದರೆ ಈ ಯಂತ್ರಗಳ ಸ್ವರೂಪ ಪ್ರಾಚ್ಯವಿದ್ಯಾ ಸಂಶೋಧನಾಲಯ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ 'ಸೌಂದರ್ಯಲಹರೀ' ಗ್ರಂಥದಲ್ಲಿರುವ ಯಂತ್ರಗಳ ಸ್ವರೂಪಕ್ಕಿಂತ ಬಹಳ ಭಿನ್ನವಾಗಿದೆ.

ಲೇಖಕಿಯ ಅಪೇಕ್ಷೆಯಂತೆ ಜನರು ಈ ಕೃತಿಯನ್ನು ಓದಿ, ಅರ್ಥಸಹಿತ ಪಾರಾಯಣ ಅನುಸಂಧಾನಗಳನ್ನು ಮಾಡಿ ದೇವಿಯ ಕೃಪಾನುಗ್ರಹಗಳಿಗೆ ಪಾತ್ರರಾಗಲಿ ಧನ್ಯರಾಗಲಿ. ಲೇಖಕಿಯ ಈ ಯತ್ನ ಸ್ತುತ್ಯವೂ ಅಭಿನಂದನೀಯವೂ ಆಗಿದೆ.

*- ಡಾ. ಕೆ.ಎಲ್.ಪ್ರಸನ್ನಾಕ್ಷೀ*




*ಕೃತಿ*
**ಸೌಂದರ್ಯಾಮೃತಮ್**
*ಲೇಖಕರು*
**ಡಾ. ವಿ. ಶ್ರೀಮತಿ**
*ಪ್ರಕಾಶಕರು*
**ವಿ.ವಿ. ಪ್ರಕಾಶನ**
**1393/2, ಸಿ.ಎಚ್.-31 (ಔಟ್‌ಹೌಸ್) 6ನೇ ಕ್ರಾಸ್, ಕೃಷ್ಣಮೂರ್ತಿಪುರಂ, ಮೈಸೂರು-570 004**
ಫೋನ್: 9448759815
*ಪುಟಗಳು* : 172
*ಬೆಲೆ* : 130/-

# ಭಕ್ತಿ ಸೌಂದರ್ಯದ ಸುರೂಪಿ ಸುಂದರಮೂರ್ತಿ ನಾಯನಾರ್

ಸ್ವಾಮಿ ವೀರೇಶಾನಂದ



ದ್ರಾವಿಡ ದೇಶವನ್ನು ಭಕ್ತಿಯ ಉಗಮಸ್ಥಾನ ಎಂದು ಭಾಗವತವು ಬಣ್ಣಿಸುತ್ತದೆ. ಹನ್ನೆರಡು ವೈಷ್ಣವ ಭಕ್ತರಾದ ಆಳ್ವಾರರು ಮತ್ತು ಶೈವಭಕ್ತರಾದ ಅರವತ್ತುಮೂರು ನಾಯನಾರರು ಈ ನಾಡಿನಲ್ಲಿ ಆಗಿಹೋದರು. ವಿಷ್ಣುಭಕ್ತಿ ಮತ್ತು ಶಿವಭಕ್ತಿಗಳ ಎರಡು ತೊರೆಗಳು ಈ ನಾಡಿನಲ್ಲಿ ಗಂಗೆ-ಯಮುನೆಯರಂತೆ ಹರಿದವು. ಭಕ್ತಿಸ್ರೋತದಿಂದ ಸಾಧಕರ ಮನಸ್ಸುಗಳನ್ನು ತೊಳೆದವು, ತಮಿಳು ಭೂಮಿಯನ್ನು ಪವಿತ್ರವನ್ನಾಗಿ ಮಾಡಿದವು.

ಅರವತ್ತುಮೂರು ನಾಯನಾರರಲ್ಲಿ ಸುಂದರ ನಾಯನಾರರದು ವಿಶಿಷ್ಟ ಸ್ಥಾನ. ಅವರನ್ನು ಭಕ್ತರು ತಂಬಿರಾನ್ ತೋಳನ್ (ಒಡೆಯನಾದ ಶಿವನ ಸ್ನೇಹಿತ) ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ಅವರು ಎಂಟನೆಯ ಶತಮಾನದ ಭಕ್ತಕವಿಗಳು. ಅವನು ರಚಿಸಿದ ಶಿವನನ್ನು ಕುರಿತ ಸ್ತುತಿಯನ್ನು 'ತಿರುತ್ತೊಂಡತ್ತೊಗೈ' ಎಂದು ಕರೆಯುತ್ತಾರೆ. ಇದು 'ಪೆರಿಯ ಪುರಾಣಂ' ಎಂಬ ಮಹಾನ್ ಗ್ರಂಥದ ಕೇಂದ್ರಬಿಂದುವಾಗಿದೆ. ಈ ಗ್ರಂಥದಲ್ಲಿ ನಾಯನಾರರ ಕಥೆಗಳ ಸಂಗ್ರಹವಿದೆ. ಈ ಪುಸ್ತಕವು ಸುಂದರರ ಕಥೆಯಿಂದ ಆರಂಭವಾಗುತ್ತದೆ; ಅವರ ಕಥೆಯಿಂದಲೇ ಕೊನೆಗೊಳ್ಳುತ್ತದೆ. ತಿರುಮರೈ ಎಂಬುದು ತಮಿಳು ಶೈವ ಸಿದ್ಧಾಂತದ ಒಂದು ಕಾವ್ಯಸಂಗ್ರಹ. ಇದರ ಏಳನೆಯ ಸಂಪುಟದಲ್ಲಿ ಇರುವ ಕಾವ್ಯಧಾರೆಯನ್ನು ರಚಿಸಿದವರು ಸುಂದರರೇ.

ಸುಂದರರ ತಂದೆತಾಯಿಗಳು ಕೂಡ ದೊಡ್ಡ ಶೈವಭಕ್ತರಾಗಿದ್ದರು. ತಂದೆಯ ಹೆಸರು ಶಡೈಯನಾರ್. ಸುಂದರರ ತಂದೆಯು ಭರದ್ವಾಜ ಗೋತ್ರದವರೆಂದು ಒಂದು ಶಿಲಾಶಾಸನ ಹೇಳುತ್ತದೆ. ತಾಯಿಯ ಹೆಸರು ಇಶೈಜ್ಞಾನಿಯಾರ್. ಅವರು ಆದಿ ಶೈವ ಪಂಗಡದವರು. ಬ್ರಾಹ್ಮಣ ಪುರೋಹಿತ ವರ್ಗಕ್ಕೆ ಸೇರಿದವರು. ಸುಂದರರ ಮೊದಲ ಹೆಸರು ನಂಬಿಆರೂರ್. ಈ ಮಗು ರಸ್ತೆಯಲ್ಲಿ ಆಟವಾಡುತ್ತಿತ್ತು. ಮಗುವಿನ ಸೌಂದರ್ಯವನ್ನು ಕಂಡು ಸ್ಥಳೀಯ ರಾಜನು ಮೋಹಿತನಾದನು. ಅವನನ್ನು ದತ್ತು ತೆಗೆದುಕೊಂಡನು. ತನ್ನ ಮಗನಂತೆಯೇ ಬೆಳೆಸಿದನು. ಹೀಗೆ ಸುಂದರರು ರಾಜಕುಲದವರಂತೆ ಬೆಳೆದರು. ಸುಂದರರು ಮಹಾನ್ ಪಲ್ಲವ ದೊರೆಯಾದ ರಾಜಸಿಂಹನ ಸಮಕಾಲೀನನಾಗಿದ್ದಾರೆ. ರಾಜಸಿಂಹ

ಕೂಡ ಒಬ್ಬರು ಮಹಾನ್ ಸಂತರು. ಅವರು ಕೂಡ ಹಲವಾರು ಭಕ್ತಿಸ್ತುತಿಗಳನ್ನು ರಚಿಸಿದ್ದಾರೆ.

ಸುಂದರರ ಜೀವನದಲ್ಲಿ ದೊಡ್ಡ ತಿರುವು ಉಂಟಾಗಿದ್ದು ಅವರ ವಿವಾಹದ ಸಮಯದಲ್ಲಿ. ಮದುವೆಯ ಸಮಾರಂಭವು ಭವ್ಯವಾಗಿ ನಡೆಯುತ್ತಿತ್ತು. ಮಧ್ಯೆ ಒಬ್ಬ ವೃದ್ಧ ಬ್ರಾಹ್ಮಣನು ಕಾಣಿಸಿಕೊಂಡನು. ''ಸುಂದರರನ ಅಜ್ಜನು ಸುಂದರರನನ್ನು ನನಗೆ ಒತ್ತೆಯಾಗಿ ಇಟ್ಟಿದ್ದಾನೆ. ಹೀಗಾಗಿ ಸುಂದರರನು ಸ್ವತಂತ್ರನಲ್ಲ, ನನ್ನ ದಾಸ. ಅವನು ಒಡನೆ ನನ್ನ ಜೊತೆಗೆ ಬರಬೇಕು'' ಎಂದು ವಾದಿಸಿದನು. ಸಾಕ್ಷ್ಯವಾಗಿ ಹಳೆಯದೊಂದು ತಾಳೆಯ ಪತ್ರದ ಮೇಲಿರುವ ಬರಹವನ್ನು ತೋರಿಸಿದನು. ಸುಂದರ ಮತ್ತು ಅವನ ಸಂಬಂಧಿಗಳು ಇದರಿಂದ ಕೋಪಗೊಂಡರು. ಆ ಮುದುಕನನ್ನು 'ಪಿತ್ತನ್' (ಹುಚ್ಚ) ಎಂದು ಕರೆದರು. ಆದರೆ ಮುದುಕನು ತನ್ನ ವಾದವನ್ನು ಮುಂದುವರೆಸಿದನು. ''ವೈದಿಕ ಬ್ರಾಹ್ಮಣರು ನ್ಯಾಯ ಹೇಳಲಿ'' ಎಂದು ಒತ್ತಾಯಿಸಿದನು. ಅದರಂತೆ ತಾಳೆಯ ಪತ್ರದ ಬರಹವನ್ನು ವೈದಿಕ ಬ್ರಾಹ್ಮಣರಿಗೆ ತೋರಿಸಲಾಯಿತು. ಅವರು ಇದು ನ್ಯಾಯಬದ್ಧವಾದ ಸಾಕ್ಷ್ಯವಾಗಿದೆ ಎಂದು ತೀರ್ಮಾನ ಹೇಳಿಬಿಟ್ಟರು. ಇದನ್ನು ಕೇಳಿ ಮದುವಣಿಗ ಸುಂದರರ ಜಂಘಾ ಬಲವೇ ಅಡಗಿಹೋಯಿತು. ಭಯ, ಹತಾಶೆಗಳಿಂದ ಅವರು ತತ್ತರಿಸಿದರು. ಮದುವೆಯ ಆನಂದದಲ್ಲಿ ಮೈಮರೆತಿದ್ದವರು, ಬಹು ದುಃಖದಿಂದ ಆ ವೃದ್ಧಬ್ರಾಹ್ಮಣನ ಹಿಂದೆ ಹೊರಟರು.

ಆ ಬ್ರಾಹ್ಮಣನು ನಡೆದೂ ನಡೆದೂ ತಿರುವಣ್ಣೈನೆಲ್ಲೂರು ಎಂಬ ಸ್ಥಳದಲ್ಲಿರುವ ಶಿವನ ಮಂದಿರವನ್ನು ತಲುಪಿದನು. ಸುಂದರರೂ ಅವನನ್ನು ಹಿಂಬಾಲಿಸಿದರು. ಕಾಲುಗಳು ಸೋತಿದ್ದವು. ದೇಹ ಬಳಲಿತ್ತು. ಆದರೂ ಆ ಮುದುಕನು ಸ್ವಲ್ಪವೂ ಕರುಣೆ ತೋರಿಸಲಿಲ್ಲ. ಮಂದಿರವನ್ನು ಪ್ರವೇಶಿಸಿದ ಒಡನೆಯೇ ಮುದುಕನು ಮಾಯವಾದನು; ಅವನು ಶಿವಲಿಂಗದೊಡನೆ ಐಕ್ಯವಾದನು. ಸುಂದರರಿಗೆ ಎಲ್ಲವೂ ತಿಳಿದುಹೋಯಿತು, ''ಈ ಮುದುಕನು ಶಿವನಲ್ಲದೆ ಬೇರೆ ಅಲ್ಲ, ನನ್ನನ್ನು ಸಂಸಾರದಿಂದ ಪಾರುಮಾಡಲು ಇಲ್ಲಿಗೆ ಕರೆತಂದಿದ್ದಾನೆ'' ಎಂದು. ''ಪರಮಾತ್ಮನೇ ನನ್ನನ್ನು ಕರೆಯಲು ಬಂದರೂ ತಾನು ಅವನನ್ನು ಗುರುತಿಸಲಾಗಲಿಲ್ಲವಲ್ಲ'' ಎಂದು ಅವರು ಬಹಳ ದುಃಖಪಟ್ಟರು, ಜೋರಾಗಿ ಗೋಳಾಡಿದರು. ತಮ್ಮ ದುಃಖವನ್ನು ತೋಡಿಕೊಂಡು ಹಾಡಿದರು. ಇವರ ಸಂತಪ್ತ ಹೃದಯವನ್ನು ಕಂಡು ಶಿವನು ಪ್ರೀತನಾದನು. ದರ್ಶನವನ್ನು ಕೊಟ್ಟು ಆಶೀರ್ವದಿಸಿದನು. ''ಅಪ್ಪಾ, ಸುಂದರನೇ. ನೀನು ಈಗಾಗಲೇ ನನ್ನ ಭಕ್ತನಾಗಿದ್ದೀಯೆ. ನೀನು ನನ್ನೊಡನೆ ಕೈಲಾಸದಲ್ಲಿ, ನನ್ನ ಅನುಚರನಾಗಿ ಇದ್ದವನು. ಈಗ ಮಾನವನಾಗಿ ಜನಿಸಿದ್ದೀಯೆ. ಒಂದೇ ಒಂದು ಕೆಟ್ಟಚಿಂತನೆ ಮಾಡಿದ್ದು, ನೀನು ಈ ಭೂಲೋಕದಲ್ಲಿ ಜನ್ಮ ತಳೆಯುವಂತೆ ಮಾಡಿತು. ಈಗ ನಾನು ನಿನ್ನನ್ನು ಕಾಪಾಡಲೆಂದೇ ನಿನ್ನ ಬಳಿಗೆ ಬಂದಿದ್ದೆ'' ಎಂದನು.

ಸುಂದರರು ಭಗವಂತನೊಡನೆಯೇ ಜಗಳವಾಡಿದರಷ್ಟೆ. ಅದು ಕೂಡ ಶಿವನಿಗೆ ಬಹಳ ಇಷ್ಟವಾಯಿತು. ಸ್ವತಃ ಭಗವಾನ್ ಶಿವನೇ ಅವರಿಗೆ 'ವನ್‌ತೊಂಡನ್' (ಕೆಟ್ಟ ಮಾತು ಆಡಿದ ಭಕ್ತ) ಎಂದು ಕರೆದನು. ''ಮಗೂ, ನೀನು ನನ್ನ ಜೊತೆ ಜಗಳಾಡುವಾಗ ನನ್ನನ್ನು ಪಿತ್ತ (ಹುಚ್ಚ) ಎಂದು ಕರೆದೆಯಷ್ಟೇ. ಈ ಹೆಸರಿನಿಂದಲೇ ಆರಂಭವಾಗುವ ಹಾಡೊಂದನ್ನು ರಚಿಸಿ ಹಾಡು'' ಎಂದನು. ಸುಂದರು ಭಕ್ತಿಭಾವ ಪರವಶನಾಗಿ 'ಪಿತ್ತಾ ! ಪಿರೈ ಶೂಡಿ!' ಎಂಬ ಹಾಡನ್ನು ಹಾಡಿದರು. ಆ ಊರಿನ ಶಿವಲಿಂಗಕ್ಕೆ 'ತಡುತಾಟ್ ಕೊಂಡ ಈಶ್ವರರ್' (ತನ್ನ ಭಕ್ತನನ್ನು ತಡೆದು ಸಂಸಾರದಿಂದ ಕಾಪಾಡಿದ ಈಶ್ವರ) ಎಂದೇ ಹೆಸರಾಯಿತು.

ಹೀಗೆ ಸುಂದರರನ್ನು ಮದುವೆಯ ಬಂಧನದಿಂದ ದೇವರೇ ಕಾಪಾಡಿದನು. ಸುಂದರರು ಪ್ರಾಪಂಚಿಕ ಜೀವನವನ್ನು ತ್ಯಜಿಸಿದರು. ತೀರ್ಥಯಾತ್ರೆ ಮಾಡಲಾರಂಭಿಸಿದರು. ತಿರುವದಿಗೈ ವೀರಟ್ಟಾನಮ್ ಎಂಬ ಪುಣ್ಯಸ್ಥಳಕ್ಕೆ ಬಂದರು. ಅಲ್ಲಿ ತಮಿಳು ನಾಡಿನ ಇನ್ನೊಬ್ಬ ಮಹಾನ್ ಸಂತರಾದ ಅಪ್ಪರ್ ವಿರಟ್ಟೇಶ್ವರ ಲಿಂಗವನ್ನು ಪೂಜಿಸಿ ಧನ್ಯತೆಯನ್ನು ಪಡೆದಿದ್ದರು. ಇಂಥ ಪುಣ್ಯಸ್ಥಳಕ್ಕೆ ಕಾಲುಗಳನ್ನು ತುಳಿದುಕೊಂಡು ಹೋಗಲು ಸುಂದರರಿಗೆ ಇಷ್ಟವಾಗಲಿಲ್ಲ. ಅವನು ಆ ಗ್ರಾಮದ ಹೊರಗೇ ಒಂದು ಮಠದಲ್ಲಿ ವಾಸ್ತವ್ಯ ಹೂಡಿದರು.

ಅಂದು ರಾತ್ರಿ ಸುಂದರರು ಗಾಢನಿದ್ರೆಯಲ್ಲಿ ಮುಳುಗಿದ್ದರು. ಭಗವಾನ್ ಶಿವನೇ ಮುದುಕನೊಬ್ಬನ ವೇಷದಲ್ಲಿ ಮಠದ ಒಳಗೆ ಪ್ರವೇಶಿಸಿದನು. ಸುಂದರರ ಪಕ್ಕದಲ್ಲಿ ಮಲಗಿಕೊಂಡು ನಿದ್ರೆ ಮಾಡುತ್ತಿರುವಂತೆ ನಟಿಸಿದನು. ಅಲ್ಲದೆ ತನ್ನ ಕಾಲನ್ನು ಸುಂದರರ ತಲೆಯ ಮೇಲಿಟ್ಟನು. ಸುಂದರರು ಎದ್ದು ಕೂಗಾಡಿದರು. ಆಗ ಆ ಮುದುಕನು ಕ್ಷಮೆ ಕೇಳಿದನು. ಸರಿಯೆಂದು ಸುಂದರರು ಕೊಠಡಿಯ ಇನ್ನೊಂದು ಬದಿಗೆ ಸರಿದು ಮಲಗಿದರು. ಅಲ್ಲಿಗೂ ಈ ಮುದುಕನು ಬಂದು ಹಾಗೆಯೇ ಮಾಡಿದನು. ಈ ಸಲ ಸುಂದರರು ಕೋಪಗೊಳ್ಳಲಿಲ್ಲ. ''ನೀವು ಯಾರು? ಹೀಗೇಕೆ ವಿಚಿತ್ರವಾಗಿ ನಡೆದುಕೊಳ್ಳುತ್ತಿದ್ದೀರಿ?'' ಎಂದು ಶಾಂತವಾಗಿ ವಿಚಾರಿಸಿದರು. ''ಅಯ್ಯೋ ನನ್ನ ಸ್ನೇಹಿತನೇ, ನನ್ನ ಗುರುತು ಹಿಡಿಯಲಿಲ್ಲವೆ?'' ಎಂದು ಶಿವನು ಅಂತರ್ಧಾನನಾದನು. 'ಓ! ನನ್ನೊಡೆಯ ಶಿವನೇ ಬಂದಿದ್ದವನು' ಎಂದು ಅರಿವಾಯಿತು ಸುಂದರರಿಗೆ. ''ಅಪ್ಪಾ, ನಾನು ನೀನಿರುವ ದೇಗುಲಕ್ಕೆ ಹೋಗದೆ ಇದ್ದುದರಿಂದ ನೀನೇ ನನ್ನನ್ನು ಕಾಣಲು ಬಂದೆಯಲ್ಲಾ, ಸ್ವಾಮಿ'' ಎಂದು ಪರಿತಾಪಪಟ್ಟರು. ತುಂಬು ಹೃದಯದಿಂದ, ''ಓ ಪ್ರಭು! ನೀನು ಎಂಥ ಕರುಣಾಶಾಲಿ! ನಿನ್ನದು ಎಂಥ ಅನುಕಂಪ! ವೇದ ಮತ್ತು ಆಗಮಗಳನ್ನು ಅರಿತವರೂ ನಿನ್ನ ಪಾದದ ಸ್ಪರ್ಶವನ್ನು ಪಡೆದುಕೊಳ್ಳಲಾರರು. ಹೀಗಿರುವಾಗ ಬಡ ಜೀವಿಯಾದ ನನ್ನ ಮೇಲಿನ ಅಪಾರ ಕೃಪೆಯಿಂದ, ಕೈಲಾಸವನ್ನು ಬಿಟ್ಟು ನಿನ್ನ ಪಾದದ ಸ್ಪರ್ಶವನ್ನು ಮಾಡಿಸಿ ನನ್ನನ್ನು ಉದ್ಧರಿಸಿದೆ, ಸ್ವಾಮಿ'' ಎಂದು ಪ್ರಾರ್ಥಿಸಿದರು.

ಸುಂದರಮೂರ್ತಿಗಳು ತಮ್ಮ ತೀರ್ಥಯಾತ್ರೆಯನ್ನು ಮುಂದುವರೆಸಿದರು. 'ತಿಲ್ಲೈ' ಎಂದು ತಮಿಳುನಾಡಿನಲ್ಲಿ ಹೆಸರಾದ ಚಿದಂಬರ ಕ್ಷೇತ್ರವನ್ನು ತಲುಪಿದರು. ದೂರದಿಂದ ದೇಗುಲದ ಗೋಪುರವನ್ನು ಕಾಣುತ್ತಲೇ ಸುಂದರರು ಭಾವ ಪರವಶರಾಗಿ, ನೆಲದ ಮೇಲೆ ಹೊರಳಾಡಿ, ಪ್ರೇಮಕಂಬನಿ ಗೈದರು. ನಟರಾಜ ಸ್ವಾಮಿಯ ದರ್ಶನವನ್ನು ಮಾಡಿ ಧನ್ಯನಾದೆ ನೆಂದು ಸಂತೋಷ ಪಟ್ಟರು. ಆಗ ಒಂದು ದಿವ್ಯವಾಣಿ ಅವರಿಗೆ ಕೇಳಿಸಿತು. ತಿರುವಾರೂರಿಗೆ ಹೋಗೆಂದು ಅದು ಆದೇಶ ನೀಡಿತು.

ಸುಂದರಮೂರ್ತಿ ನಾಯನಾರರು ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಕಡೆಗೆ ತಿರುವಾರೂರಿಗೆ ಬಂದರು. ತಿರುವಾರೂರಿನ ಬ್ರಾಹ್ಮಣರ ಕನಸಿನಲ್ಲಿ ಭಗವಂತನೇ ಬಂದು, ಸುಂದರರನ್ನು ಸನ್ಮಾನಪೂರ್ವಕವಾಗಿ ಎದುರುಗೊಳ್ಳುವಂತೆ ಆದೇಶವಿತ್ತನು. ಅವರೆಲ್ಲ ಹಾಗೆಯೇ ಮಾಡಿದರು. ದೇವಸ್ಥಾನದಲ್ಲಿ ಶಿವನನ್ನು ಪೂಜಿಸುತ್ತಿರುವಾಗ ಮತ್ತೊಂದು ದಿವ್ಯವಾಣಿ ಅವರಿಗೆ ಕೇಳಿಸಿತು: ''ಸುಂದರನೇ, ನಾನು ನಿನ್ನನ್ನು ನನ್ನ ಸ್ನೇಹಿತನನ್ನಾಗಿ ಮಾಡಿ ಕೊಂಡೆ. ನೀನು ಮದುವೆಯಾಗುವುದನ್ನು ತಡೆದೆ. ಇನ್ನು ನೀನು ಸುಂದರ ಮದುವಣಿಗನ ರೂಪವನ್ನೇ ತಾಳುವೆ. ಈ ಭುವಿಯಲ್ಲಿ ಆನಂದದಿಂದ ನಲಿದಾಡುವೆ.'' ಒಡನೆಯೇ ಸುಂದರರು ಮದು ವಣಿಗನ ಹಾಗೆ ಸುಂದರರೂಪಿಯಾದರು. ಜನರು ಅವರನ್ನು 'ತಂಬಿರಾನ್ ತೋಳರ್' (ದೇವರ ಸ್ನೇಹಿತ) ಎಂದು ಕರೆದು ಆದರಿಸಿದರು.

ತಿರುವಾರೂರಿನಲ್ಲಿ ಒಬ್ಬಳು ಭಕ್ತಮಹಿಳೆಯಿದ್ದಳು. ಅವಳ ಹೆಸರು ಪರವೈಯಾರ್ ಎಂದು. ಅವಳು ಕೈಲಾಸದಲ್ಲಿ ಪಾರ್ವ ತಿಯ ಸೇವೆ ಮಾಡುತ್ತಿದ್ದ ಕಮಲಿನಿ ಎಂದು ಜನರ ನಂಬಿಕೆ. ಅವಳು ದಿನನಿತ್ಯವೂ ದೇವಸ್ಥಾನಕ್ಕೆ ಹೋಗುವಳು. ಶಿವನನ್ನು ಭಕ್ತಿ ಶ್ರದ್ಧೆಗಳಿಂದ ಪೂಜಿಸುವಳು. ಅವನ ಗುಣಗಳ ಸಂಕೀರ್ತನೆ ಮಾಡುವಳು. ಒಂದು ದಿನ ತನ್ನ ಗೆಳತಿಯರೊಡನೆ ದೇವಸ್ಥಾನಕ್ಕೆ ಬಂದಳು. ಅದೇ ಸಮಯಕ್ಕೆ ಸುಂದರರೂ ತಮ್ಮ ಅನುಯಾಯಿ ಗಳೊಂದಿಗೆ ದೇವಾಲಯವನ್ನು ಪ್ರವೇಶ ಮಾಡಿದರು. ಯಾವ ಜನ್ಮದ ಕರ್ಮವೋ ಏನೋ, ಸುಂದರರು ಆ ಯುವತಿಯ ಸೌಂದರ್ಯಕ್ಕೆ ಮಾರುಹೋದರು. ಅವಳನ್ನು ಮದುವೆಯಾಗ ಬೇಕೆಂದು ಹಾತೊರೆದರು. ಇದೇ ಚಿಂತೆಯಲ್ಲಿಯೇ ಗರ್ಭ ಮಂದಿರವನ್ನು ಪ್ರವೇಶಿಸಿದರು. ತಮ್ಮ ಸ್ನೇಹಿತನಾದ ಭಗವಂತ ನಲ್ಲಿ ತಮ್ಮ ಬಯಕೆಯನ್ನು ತೋಡಿಕೊಂಡರು. ಆ ಯುವತಿ ಪರವೈಯಾರ್ ಕೂಡ ಸುಂದರರತ್ತ ಆಕರ್ಷಿತಳಾದಳು. ಅವರನ್ನು ತಾನು ವರಿಸಬೇಕೆಂದು ಶಿವನಲ್ಲಿ ಪ್ರಾರ್ಥಿಸಿದಳು. ಇದನ್ನೆಲ್ಲ ಮಾಡಿಸಿದ್ದು ಆ ಶಿವನೇ. ಅವನೇ ಇವರಿಬ್ಬರ ಕನಸಿನಲ್ಲಿ ಬಂದು ಮದುವೆಯಾಗಿರೆಂದು ತಿಳಿಸಿದನು. ಭಕ್ತರ ಕನಸಿನಲ್ಲಿ ಬಂದು, ಮರುದಿನವೇ ವಿವಾಹ ಮಹೋತ್ಸವವನ್ನು ಜರುಗಿಸಬೇಕೆಂದೂ ಆದೇಶವಿತ್ತನು. ಎಲ್ಲವೂ ಸುಗಮವಾಗಿ ನಡೆದುಹೋಯಿತು. ಪರವೈಯಾರ್ ಮತ್ತು ಸುಂದರರ ಆನಂದಕ್ಕೆ ಪಾರವೇ ಇಲ್ಲ ದಾಯಿತು.

ಸುಂದರಮೂರ್ತಿಗಳು ತಿರುವಾರೂರಿನಲ್ಲಿಯೇ ವಾಸ್ತವ್ಯ ಹೂಡಿ ಗೃಹಸ್ಥಾಶ್ರಮವನ್ನು ಆರಂಭಿಸಿದರು. ಕೀಲರ್ ಎಂಬ ಭಕ್ತನು ಅವರಿಗೆ ಬಹಳವಾಗಿ ನಡೆದುಕೊಳ್ಳುತ್ತಿದ್ದನು. ತನ್ನ ಊರಾದ ಕುಂಡಯೂರಿನಿಂದ ದವಸಧಾನ್ಯಗಳನ್ನು ತಂದು ಕೊಡುತ್ತಿದ್ದನು. ಒಮ್ಮೆ ಭಯಂಕರ ಬರ ಬಂದೊದಗಿತು. ಗ್ರಾಮ ಸ್ಥರು ಆಹಾರದ ಅಭಾವದಿಂದ ನರಳುತ್ತಿದ್ದರು. ಭಕ್ತನಿಗೆ ತನ್ನ ಸೇವೆಯನ್ನು ಸಲ್ಲಿಸಲಾಗಲಿಲ್ಲ. ಆಗ ಭಗವಂತನೇ ಅವನ ಕನಸಿ ನಲ್ಲಿ ಬಂದು ಆಶ್ವಾಸನೆ ನೀಡಿದನು. ಮರುದಿನ ಅವನ ಮನೆಯ ಮುಂದೆ ಧಾನ್ಯದ ದೊಡ್ಡ ರಾಶಿಯೇ ಬಿದ್ದಿತ್ತು. ಇತ್ತ ಭಗವಂತನ ಆಣತಿಯಂತೆ ಸುಂದರರು ಕುಂಡಯೂರಿನ ಕಡೆಗೆ ಹೊರಟರು. ಧಾನ್ಯದ ರಾಶಿಯನ್ನು ಕಂಡು ಇದೆಲ್ಲವೂ ಶಿವನ ಲೀಲೆಯೇ ಎಂದು ನಿಶ್ಚಯಿಸಿದರು. ಅದೆಲ್ಲವನ್ನೂ ತಿರುವಾರೂರಿನ ತಮ್ಮ ಮನೆಗೆ ಒಯ್ದು ಊರಿಗೆಲ್ಲ ಹಂಚಿಬಿಟ್ಟರು. ಈ ಸಂದರ್ಭದಲ್ಲಿ ಸುಂದರರೂ ಅವರ ಪತ್ನಿಯೂ ಭಗವಂತನನ್ನು ಕೊಂಡಾಡುತ್ತ ಕೀರ್ತನೆಗಳನ್ನು ಹಾಡಿದರು. ಹೀಗೆ ಬರ ನೀಗಲ್ಪಟ್ಟಿತು.

ಹೀಗೆ ಸುಂದರ ನಾಯನಾರರ ಜೀವನದಲ್ಲಿ ಅನೇಕ ವಿಚಿತ್ರ ಘಟನಾವಳಿಗಳನ್ನು ಕಾಣುತ್ತೇವೆ. ಶಿವನು ಅವರೊಡನೆ ಬಹು ವಾಗಿ ಆಟವಾಡಿದನು ಎಂದು ಹೇಳುತ್ತಾರೆ. ಈ ಆಟದಲ್ಲಿ ಪರ ಮಾತ್ಮನು ಸುಖವನ್ನು ಕೊಟ್ಟನು, ದುಃಖವನ್ನೂ ನೀಡಿದನು. ಈ ರೀತಿಯಲ್ಲಿ ಶಿವನು ತನ್ನ ಸ್ನೇಹಿತನಾದ ಸುಂದರನ ಜೊತೆಯಲ್ಲಿ ಬಗೆಬಗೆಯ ಕ್ರೀಡೆಗಳನ್ನಾಡಿದನು.

ಅಂದಿನ ದಿನಗಳಲ್ಲಿ ಸಂಗಿಲಿಯಾರ್ ಎಂಬ ಹೆಣ್ಣುಮಗಳು ತೊಂಡೈ ನಾಡಿನಲ್ಲಿ ಇದ್ದಳು. ಅವಳು ಕೂಡ ದೈವಾಂಶಸಂಭೂತೆ. ಸಂಗಿಲಿಯಾರ್ ಪಾರ್ವತಿಯ ಮೇಲೆ ಭಕ್ತಿಯನ್ನು ಇಟ್ಟುಕೊಂಡಿ ದ್ದಳು. ಒಮ್ಮೆ ಅವಳ ತಂದೆತಾಯಿಯರು ಅವಳ ಬಳಿ ವಿವಾಹದ ಪ್ರಸ್ತಾಪ ಮಾಡಿದರು. ಅದನ್ನು ಕೇಳಿದೊಡನೆಯೇ ಅವಳು ಮೂರ್ಛೆ ತಪ್ಪಿ ಬಿದ್ದಳು. ತಂದೆ ಅವಳನ್ನು ತಿರುವಟ್ರಿಯೂರ್‌ಗೆ ಕರೆದುಕೊಂಡು ಹೋಗಿ, ಒಂದು ಆಶ್ರಮವನ್ನು ಮಾಡಿಕೊಟ್ಟನು. ಸಂಗಿಲಿಯಾರ್ ಪ್ರತಿದಿನ ಶಿವನಿಗೆ ಹೂವಿನ ಹಾರಗಳನ್ನು ಮಾಡಿ ಕೊಡುತ್ತಿದ್ದಳು. ಅವನ್ನು ದೇವಸ್ಥಾನಕ್ಕೆ ಒಯ್ದು ಅರ್ಪಿಸುತ್ತಿದ್ದಳು. ಇದೇ ಅವಳ ಸಾಧನೆಯಾಗಿತ್ತು. ಸುಂದರಮೂರ್ತಿಗಳು ಅವ ಳನ್ನು ನೋಡಿದರು. ಅವಳೆಡೆಗೆ ಆಕರ್ಷಿತರಾದರು. ಅವಳನ್ನು ಮದುವೆಯಾಗಬೇಕೆಂದು ಬಯಸಿದರು. ಈ ಇಚ್ಛೆಯನ್ನು ದೇವ ರಿಗೆ ನಿವೇದಿಸಿದರು ಕೂಡ. ಶಿವನೇ ಕನ್ಯೆಯ ಕನಸಿನಲ್ಲಿ ಬಂದು ಸುಂದರರನ್ನು ಮದುವೆಯಾಗುವಂತೆ ಹೇಳಿದನು. ಸಂಗಿಲಿ ಯಾರ್ ಒಪ್ಪಿಕೊಂಡಳು. ಆದರೆ ಒಂದು ಷರತ್ತನ್ನು ಹಾಕಿದಳು. ಗಂಡನು ಎಂದೂ ತನ್ನನ್ನು ಬಿಟ್ಟು ಹೋಗಬಾರದು ಎಂಬುದೇ ಆ ಷರತ್ತು. ಇದನ್ನು ಶಿವನು ಸುಂದರರಿಗೆ ಹೇಳಿದಾಗ ಅವರು ಅದಕ್ಕೆ

ನಿರಾಕರಿಸಿದರು. ''ನಾನು ನಿನ್ನ ವಿಗ್ರಹದ ಮುಂದೆ ಪ್ರಮಾಣ ಮಾಡುವಾಗ, ನೀನು ಹತ್ತಿರದ ಮರಕ್ಕೆ ನಿನ್ನ ಸಾನ್ನಿಧ್ಯವನ್ನು ಸ್ಥಳಾಂತರಿಸು. ಆಗ ನನ್ನ ಪ್ರಮಾಣಕ್ಕೆ ಸಾಕ್ಷಿಯಿರುವುದಿಲ್ಲ'' ಎಂದರು. ಆದರೆ ಮುಂದೆ ಶಿವನೇ ಈ ರಹಸ್ಯವನ್ನು ಸಂಗಲಿಯಾರ್‌ಗೆ ಹೇಳಿಕೊಟ್ಟು, ಮರದ ಮುಂದೆ ಪ್ರಮಾಣ ಮಾಡುವಂತೆ ಕೇಳಿಕೋ ಎಂದು ಉಪದೇಶಿಸಿದನು. ಅದರಂತೆ ಆಕೆ ಸುಂದರರನ್ನು ಕೇಳಿಕೊಂಡಾಗ, ಸುಂದರರ ಜಂಘಾಬಲವೇ ಉಡುಗಿಹೋಯಿತು. ಶಿವನೇ ತನ್ನನ್ನು ಪರೀಕ್ಷಿಸುತ್ತಿದ್ದಾನೆ ಎಂದುಕೊಂಡರು. ಬೇರೆ ದಾರಿಯಿಲ್ಲದೆ ಒಪ್ಪಿಕೊಂಡು, ಶಿವನ ಸಾನ್ನಿಧ್ಯವಿದ್ದ ಆ ಮರದ ಮುಂದೆಯೇ ಮಾತುಕೊಟ್ಟು ಮದುವೆಯಾಗಿಬಿಟ್ಟರು.

ತಿರುವಾರೂರಿನಲ್ಲಿ ಶಿವನಿಗೆ ವಸಂತೋತ್ಸವವು ವಿಜೃಂಭಣೆಯಿಂದ ನಡೆಯುತ್ತದೆ. ಅದಕ್ಕೆ ಹೋಗಬೇಕೆಂದು ಸುಂದರರಿಗೆ ಆಸೆ. ಆದರೆ ಮಾತುಕೊಟ್ಟ ಪ್ರಕಾರ ಸಂಗಲಿಯಾರ್‌ಳನ್ನು ಬಿಟ್ಟು ಹೋಗುವಂತಿಲ್ಲ. ಬಯಕೆ ತಾಳಲಾರದೆ, ಹೊರಟುನಿಂತರು. ದಾರಿಯಲ್ಲಿ ಊರಿನ ಗಡಿಯನ್ನು ದಾಟಿದ ಒಡನೆ ಅವರ ಕಣ್ಣಿನ ದೃಷ್ಟಿಯೇ ಹೊರಟುಹೋಯಿತು. ಜಾರಿಬಿದ್ದು ಮೈಕೈ ಮುರಿದುಕೊಂಡರು. ಕರ್ಮಗತಿಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಮೂರ್ಛೆತಪ್ಪಿ ಬಿದ್ದ ಸುಂದರರಿಗೆ ಜ್ಞಾನ ಬರಲು ಬಹಳ ಕಾಲ ಬೇಕಾಯಿತು. ಎಚ್ಚರಗೊಂಡ ಸುಂದರರು ತಮ್ಮ ತಪ್ಪನ್ನು ಅರಿತು ಭಗವಾನ್ ಶಿವನನ್ನು ಕ್ಷಮೆದೋರೆಂದು ಅಂಗಲಾಚಿ ಬೇಡಿಕೊಂಡರು; ಕಣ್ಣಿನ ದೃಷ್ಟಿಯನ್ನು ಮತ್ತೆ ದೊರಕಿಸಿಕೊಡೆಂದು ಕೇಳಿಕೊಂಡರು. ಅವರ ಹೃದಯಂಗಮ ಪ್ರಾರ್ಥನೆಯು ಹಾಡಿನ ರೂಪದಲ್ಲಿ ಹೀಗೆ ಹೊರಹೊಮ್ಮಿತು: ''ಓ ಪ್ರಭು! ನಾನು ನಿನ್ನಲ್ಲಿ ಸಂಪೂರ್ಣ ಶರಣಾಗಿದ್ದೇನೆ. ನಾನು ಎಂದೆಂದಿಗೂ ನಿನ್ನ ಪವಿತ್ರ ನಾಮವನ್ನು ಜಪಿಸುತ್ತಿರುತ್ತೇನೆ. ಕಣ್ಣು ಹೋಗಿ, ಜಾರಿ ಬಿದ್ದಾಗಲೂ ನಿನ್ನ ಸ್ಮರಣೆಯನ್ನೇ ನಾನು ಮಾಡುತ್ತಿದ್ದೆನು. ಓ ಪ್ರಭು, ಕರುಣಾಶಾಲಿ! ನಾನು ತಪ್ಪು ಮಾಡಿದರೂ, ಅದನ್ನು ಕ್ಷಮಿಸುವುದು ನಿನ್ನ ಜವಾಬ್ದಾರಿಯಲ್ಲವೆ? ಪ್ರಭೂ, ದಯವಿಟ್ಟು ನನ್ನನ್ನು ಕ್ಷಮಿಸಿಬಿಡು.''

ಅಂಧರಾದರೂ, ತಿರುವಾರೂರಿನ ಶಿವನ ದರ್ಶನವನ್ನು ಮಾಡಬೇಕೆಂಬ ಸುಂದರರ ತವಕ ಹೋಗಲಿಲ್ಲ. ಕೆಲವು ಜನರ ಸಹಾಯದಿಂದ ಪ್ರಯಾಣ ಮಾಡುತ್ತಲೇ ಹೋದರು. ಅನೇಕ ಕಡೆಗಳಲ್ಲಿ ನಿಂತು, ಭಗವಂತನನ್ನು ಮತ್ತೆ ಮತ್ತೆ ಪ್ರಾರ್ಥಿಸಿಕೊಂಡರು. ಕಡೆಗೆ ತಿರುವೆಣ್‌ಪಾಕ್ಕಂ ಎಂಬ ಕಡೆ ದೇವಸ್ಥಾನದಲ್ಲಿ ಹೀಗೆ ಪ್ರಾರ್ಥಿಸಿದರು: ''ನೀನೇ ನನ್ನನ್ನು ನಿನ್ನಡಿಗೆ ಕರೆದುಕೊಂಡೆಯೋ, ನನ್ನಪ್ಪಾ. ನನ್ನನ್ನು ನಿಮಿತ್ತವಾಗಿಟ್ಟುಕೊಂಡು ಅದೆಷ್ಟು ಲೀಲೆಗಳನ್ನು ಆಡಿದೆಯೋ, ಹೇ ಭಗವಾನ್! ನೀನು ಈ ದೇಗುಲದಲ್ಲಿ ಇರುವೆಯೋ, ಇಲ್ಲವೊ?'' ಇದಕ್ಕೆ ಉತ್ತರವಾಗಿ ಶಿವನು ಉದಾಸೀನದಿಂದ, ''ಹೌದು, ನಾನಿಲ್ಲಿದ್ದೇನೆ. ನಡೆ ಇನ್ನು'' ಎನ್ನುತ್ತ ಕುರುಡನಿಗೆ ಸಹಾಯಕವಾಗುವ ಕೋಲನ್ನು ಕೊಟ್ಟನು. ಭಗವಂತನ ಅವಜ್ಞೆಯನ್ನು ನೋಡಿ ಸುಂದರರ ಮನಸ್ಸು ಮತ್ತಷ್ಟು ನೊಂದಿತು. ಮತ್ತೆಮತ್ತೆ ಕ್ಷಮೆ ಬೇಡಿ ಪ್ರಾರ್ಥಿಸಿದರು: ''ಭಗವಂತನೇ, ಸಂಗಿಲಿಯಾರ್‌ಳನ್ನು ಮದುವೆ ಮಾಡಿಕೊಟ್ಟು ಸುಖಪಡಿಸಿದವನೂ ನೀನೇ. ಕುರುಡುತನ ಕೊಟ್ಟು ನನಗೆ ದುಃಖ ಕೊಟ್ಟವನೂ ನೀನೇ. ನಿನ್ನ ಕರುಣೆಗೆ ನಾನು ಪಾತ್ರನಲ್ಲವೆ? ನನ್ನನ್ನು ನೀನು ತಿರಸ್ಕರಿಸಿಬಿಟ್ಟೆಯಾ?'' ಆದರೂ ಶಿವನ ಕೋಪ ಅಡಗಲಿಲ್ಲ.

ಶಿವನ ಇಚ್ಛೆಗೆ ಸಂಪೂರ್ಣ ತಲೆಬಾಗಿದ ಸುಂದರಮೂರ್ತಿಗಳು ಕಾಂಚೀಪುರಕ್ಕೆ ಬಂದರು. ತಾಯಿ ಕಾಮಾಕ್ಷಿಯನ್ನು ಪ್ರಾರ್ಥಿಸಿದರು. ಏಕಾಂಬರೇಶ್ವರ ಶಿವನನ್ನು ಪೂಜಿಸಿದರು. ತಾಯಿ ಕಾಮಾಕ್ಷಿಯ ಕೃಪಾಕಟಾಕ್ಷ ಈಗಾಗಲೇ ಸುಂದರರ ಮೇಲೆ ಬಿದ್ದಿತ್ತು. ಅದನ್ನರಿತ ಭಗವಾನ್ ಶಿವನು ಒಡನೆ ಸುಂದರರ ಎಡಗಣ್ಣಿನ ದೃಷ್ಟಿಯನ್ನು ಸರಿಪಡಿಸಿದನು. ಸುಂದರರ ಸಂತೋಷಕ್ಕೆ ಪಾರವೇ ಇಲ್ಲ. ಆನಂದ ಉನ್ಮಾದಗಳಿಂದ ಅವರು ನೆಲದ ಮೇಲೆ ಹೊರಳಾಡಿದರು. ಪ್ರೇಮದ ಕಂಬನಿಗಳನ್ನು ಮಿಡಿದರು.

ಸುಂದರರು ಕೆಲವು ದಿನಗಳನ್ನು ಅಲ್ಲಿ ಕಳೆದು, ತಿರುವಾರೂರಿಗೆ ತಮ್ಮ ಪಯಣವನ್ನು ಮುಂದುವರೆಸಿದರು. ತಿರುವಾಡುದುರೈ ಎಂಬಲ್ಲಿ ಭಗವಂತನನ್ನು ಪ್ರಾರ್ಥಿಸಿ, ಬಲಗಣ್ಣಿನ ದೃಷ್ಟಿಯನ್ನೂ ಪಡೆದುಕೊಂಡರು. ತಿರುತ್ತುರಿತ್ತಿ ಎಂಬಲ್ಲಿಗೆ ಬಂದಾಗ, ಹತ್ತಿರದ ಕೊಳದಲ್ಲಿ ಸ್ನಾನಮಾಡುವಂತೆ ಭಗವಂತನ ಆದೇಶವಾಯಿತು. ಹಾಗೆ ಮಾಡಿದೊಡನೆಯೇ ಅವರ ದೇಹವು ಚಿನ್ನದ ಹಾಗೆ ಹೊಳಪನ್ನು ಪಡೆದುಕೊಂಡಿತು. ಈ ಪರಿವರ್ತನೆಯನ್ನು ಕಂಡು ಜನರು ಚಕಿತಗೊಂಡರು. ತಿರುವಾರೂರಿನ ಹೊರವಲಯದಲ್ಲಿಯೇ ಸುಂದರರಿಗೆ ಅಲ್ಲಿನ ಬೃಹತ್ ದೇವಾಲಯದ ಗೋಪುರದ ದರ್ಶನವಾಯಿತು. ಅದು ಅವರ ಮೈಮನಗಳನ್ನು ತುಂಬಿಗೊಂಡಿತು. ಎರಡೂ ಕಣ್ಣುಗಳಿಂದ ಭಗವಂತನ ಮನೋಹರ ಆಕೃತಿಯನ್ನು ಕಂಡು ಅವರಲ್ಲಿ ಪರಮ ಭಕ್ತಿಭಾವ ಹೊರಹೊಮ್ಮಿತು. ಅಪಾರ ಆನಂದದ ಸಾಗರದಲ್ಲಿ ಅವರ ಮನಸ್ಸು ಮುಳುಗಿಹೋಯಿತು. ದಿವ್ಯಾನಂದದಲ್ಲಿ ಅವರು ಲೀನರಾದರು.

ಸುಂದರರ ಮೊದಲ ಹೆಂಡತಿ ಪರವೈಯಾರ್‌ಗೆ ಸುಂದರರ ಎರಡನೆಯ ಮದುವೆಯ ಸಂಗತಿ ತಿಳಿದುಬಂದು, ಬಹಳ ದುಃಖ ಉಂಟಾಯಿತು. ಸುಂದರರಿಗೆ ಅವಳನ್ನು ಭೇಟಿಯಾಗಬೇಕೆಂಬ ತವಕ. ಆಗ ಶಿವನೇ ಬ್ರಾಹ್ಮಣನ ರೂಪದಲ್ಲಿ ದೂತನಾಗಿ ಪರವೈಯಾರ್ ಬಳಿಗೆ ಹೋಗಿ, ಸುಂದರರ ಕಾತರತೆಯನ್ನು ಅವಳಿಗೆ ತಿಳಿಸಿದನು. ದೂತನಾಗಿ ಬಂದವನು ಭಗವಂತನೇ ಎಂದರಿತ ಪರವೈಯಾರ್ ಆ ಬ್ರಾಹ್ಮಣನ ಕಾಲಿಗೆ ಬಿದ್ದಳು. ಭಗವಂತನ ಆಣತಿಯಂತೆ ತನ್ನ ಗಂಡನನ್ನು ಮನೆಗೆ ಬರಮಾಡಿಕೊಂಡಳು. ಸುಂದರರು ಶಿವನನ್ನೇ ದೂತನಾಗಿ ಮಾಡಿಕೊಂಡ ವಿಚಾರ ಎಲ್ಲೆಡೆ ಹಬ್ಬಿತು.

ತಿರುಪ್ಪೆರುಮಂಗಲಂ ಎಂಬುದೊಂದು ಊರು; ಅಲ್ಲಿ ಎಯರ್‌ಕೋನ್ ಕಲಿಕ್ಕಾಮ ನಾಯನಾರ್ ಎನ್ನುವ ದೊಡ್ಡ ಭಕ್ತರು ಇದ್ದರು. ಅವರಿಗೆ ಈ ವರ್ತಮಾನ ತಿಳಿದು ಸುಂದರರ ಮೇಲೆ ಬಹಳ ಕೋಪ ಬಂತು. ಮನೆಯ ಜಗಳ ತೀರ್ಮಾನಿಸಲು ಶಿವನನ್ನೇ ದೂತನಾಗಿ ಕಳಿಸುವುದೆ? ಇದೆಂಥ ಅಪಚಾರ ಎಂದು ಕೊಂಡರು. ಭಗವಂತನು ಅವರಿಬ್ಬರ ಮನಸ್ತಾಪವನ್ನೂ ಬಹಳ ಅದ್ಭುತ ರೀತಿಯಲ್ಲಿ ಪರಿಹರಿಸಿದನು.

ನಂತರ, ಸುಂದರರಿಗೆ ಚೇರಮಾನ್ ಪೆರುಮಾಳ್ ನಾಯ ನಾರ್ ಎಂಬ ಭಕ್ತರ ಜೊತೆಗೆ ಸ್ನೇಹವಾಯಿತು. ಅವರು ರಾಜ ಕುಲಕ್ಕೆ ಸೇರಿದವರು. ಈ ಸ್ನೇಹ ಬಾಂಧವ್ಯಕ್ಕೆ ಬೆಸುಗೆ ನೀಡಿದವನೂ ಭಗವಾನ್ ಶಿವನೇ. ಇವರಿಬ್ಬರೂ ದೀರ್ಘ ತೀರ್ಥಯಾತ್ರೆ ಕೈಗೊಂಡರು. ಮಧುರೆಯ ಕಡೆಗೆ ಹೊರಟರು. ಸುಂದರರದು ಸಖ್ಯಭಾವ. ಭಗವಂತನನ್ನು ಸ್ನೇಹಿತನೆಂದೇ ಭಾವಿಸಿದ್ದರು. ಭಗ ವಂತನ ಸಂಕೀರ್ತನೆ ಮಾಡುತ್ತ ಇಬ್ಬರೂ ಪಯಣ ಬೆಳೆಸಿದರು. ಕಡೆಗೆ ಚೇರಮಾನ್ ಸುಂದರರನ್ನು ತನ್ನ ಸ್ಥಳಕ್ಕೆ ಕರೆದೊಯ್ದನು. ಸುಂದರರು ವೈಭವದಿಂದ ಅವನ ಜೊತೆ ಕೆಲವು ಕಾಲ ಇದ್ದರು. ಒಮ್ಮೆ ಹಠಾತ್ತನೆ ಅವರಿಗೆ ತಿರುವಾರೂರಿನ ತಮ್ಮೊಡೆಯ ಭಗ ವಾನ್ ಶಿವನ ನೆನಪು ಕಾಡಿತು. ಒಡನೆ ತಿರುವಾರೂರಿಗೆ ತೆರಳಿ ದರು. ಚೇರಮಾನ್‌ಗೆ ಬರಲಾಗಲಿಲ್ಲ. ಅದಕ್ಕಾಗಿ ಬಹಳ ನೊಂದು ಕೊಂಡನು. ಸುಂದರರಿಗೆ ಅವನು ಹಲವಾರು ಕೊಡುಗೆಗಳನ್ನು ಕೊಟ್ಟನು. ದಾರಿಗುಂಟ ಜನರನ್ನು ಕಳಿಸಿದನು. ಆದರೆ ಶಿವನ ಇಚ್ಛೆಯೇ ಬೇರೆಯಾಗಿತ್ತು. ದಾರಿಯ ಮಧ್ಯೆ ತನ್ನ ಸೇವಕರನ್ನೇ ಕಳಿಸಿ, ಕೊಡುಗೆಗಳನ್ನು ಕಿತ್ತುಗೊಂಡನು. ಬಂದಿದ್ದ ಜನರೆಲ್ಲ ದಿಕ್ಕಾ ಪಾಲಾಗಿ ಓಡಿದರು. ಸುಂದರರು ದುಃಖಿತರಾಗಿ ದಾರಿಮಧ್ಯದ ಒಂದು ದೇವಸ್ಥಾನಕ್ಕೆ ಹೋಗಿ ಸ್ತುತಿಯೊಂದನ್ನು ಹಾಡಿದರು. ಹೊರಗೆ ಬಂದು ನೋಡುತ್ತಾರೆ, ಕದ್ದುಹೋದದ್ದೆಲ್ಲವೂ ಮತ್ತೆ ಬಂದೊದಗಿದ್ದವು. ಸುಂದರರು ಶಿವನ ಮನಸ್ಸನ್ನು ಅರಿತರು. ಮನುಷ್ಯಮಾತ್ರನಾದವನ ಕೊಡುಗೆಯು ನಷ್ಟವಾಗಿ ಹೋಗು ತ್ತದೆ. ದೇವರ ಕೊಡುಗೆ ಮಾತ್ರ ಬಹುಕಾಲ ಉಳಿಯುತ್ತದೆ. ದೇವರ ಸ್ನೇಹಿತನಿಗೆ ದೇವರ ಕೊಡುಗೆ ಇದು. ಇದನ್ನು ಮಾತ್ರ ಅನುಭವಿಸಲು ಸಾಧ್ಯ. ದೇವರ ಲೀಲೆಯೇ ಹೀಗೆ ವಿಚಿತ್ರ.

ಚೇರಮಾನ್ ಪೆರುಮಾಳ್ ನಾಯನಾರ್ ಸುಂದರರನ್ನು ಮತ್ತೆ ಭೇಟಿಯಾದರು. ಸುಂದರರು ಕೈಲಾಸಕ್ಕೆ ಹೋಗುತ್ತಾರೆ ಎಂಬುದು ಅವರಿಗೆ ಹೇಗೋ ತಿಳಿದುಬಂತು. ಒಡನೆ ಅವರು ಸುಂದರರ ಹತ್ತಿರ ಓಡೋಡಿ ಬಂದರು. ಆ ಸ್ಥಳದ ಹೆಸರು ತಿರು ವಂಜೈಕ್ಕಳಂ ಎಂದು. ಸುಂದರರು ದೇವಲೋಕದ ಆನೆಯ ಮೇಲೆ ಕುಳಿತು ಆಕಾಶಮಾರ್ಗದಲ್ಲಿ ಹೋಗುತ್ತಿರುವುದನ್ನು ನೋಡಿ ದರು. ಒಡನೆ ತಮ್ಮ ಕುದುರೆಯ ಕಿವಿಯಲ್ಲಿ ಶಿವ ಪಂಚಾಕ್ಷರಿ ಮಂತ್ರವನ್ನು ಉಸುರಿದರು. ಕುದುರೆಯೂ ಆಕಾಶದತ್ತ ನೆಗೆದು, ಸುಂದರರನ್ನು ಕೂಡಿಕೊಂಡಿತು. ಚೇರಮಾನರು ಅಲ್ಲಿಯೇ ಸುಂದರರನ್ನು ಪೂಜಿಸಿದರು. ಬಳಿಕ ಇಬ್ಬರೂ ಸೂಕ್ಷ್ಮ ದೇಹ ದಿಂದ ಕೈಲಾಸವನ್ನು ಸೇರಿದರು. ಕೈಲಾಸ ದ್ವಾರದಲ್ಲಿ ಸುಂದರರಿಗೆ ಪ್ರವೇಶ ದೊರಕಿತು. ಚೇರಮಾನರಿಗೆ ದೊರಕಲಿಲ್ಲ. ಒಳಕ್ಕೆ ಹೋದ ಸುಂದರರು ತಮ್ಮ ಸ್ನೇಹಿತನ ಸಲುವಾಗಿ ಭಗವಾನ್ ಶಿವನನ್ನು ಬಹುವಾಗಿ ಬೇಡಿಕೊಂಡರು. ಚೇರಮಾನರನ್ನು ಬರ ಮಾಡಿಕೊಳ್ಳಲು ನಂದಿಕೇಶನನ್ನೇ ಭಗವಾನ್ ಶಿವನು ಕಳಿಸಿದನು. ಶಿವನು ಚೇರಮಾನರನ್ನು, ''ನನ್ನ ಅನುಮತಿ ಇಲ್ಲದೆ ಇಲ್ಲೇಕೆ ಬಂದೆ?'' ಎಂದು ಕಟುವಾಗಿ ಕೇಳಿದನು. ತಮ್ಮ ಸ್ನೇಹಿತನಾದ ಸುಂದರರ ಅಗಲಿಕೆಯನ್ನು ತಾಳಲಾರದೆ, ಅವರನ್ನು ಬೆಂಬೆತ್ತಿ ಬಂದೆನೆಂದು ಚೇರಮಾನ್ ಅರುಹಿದರು. ಹೀಗೆ ಸುಂದರರ ಸಹಾಯದಿಂದ ಚೇರಮಾನರಿಗೂ ಕೈಲಾಸವಾಸ ಲಭಿಸಿತು. ಸಂತರ ಸಹವಾಸದಿಂದ ಶಿವನ ಲೋಕವನ್ನು ಗಳಿಸಿಕೊಳ್ಳಲು ಸಾಧ್ಯ ಎಂಬ ಸತ್ಯ ಹೀಗೆ ನಿಜವಾಯಿತು. ಕಾಲಾಂತರದಲ್ಲಿ ಸುಂದ ರರ ಇಬ್ಬರು ಪತ್ನಿಯರೂ ತಮ್ಮ ಕರ್ಮಬಂಧನವನ್ನು ಕಳೆದು ಕೊಂಡು, ಕೈಲಾಸ ಸೇರಿದರು; ತಾಯಿ ಪಾರ್ವತಿಯ ಅನುಚರ ರಾದರು.

ಸುಂದರ ಮೂರ್ತಿ ನಾಯನಾರರ ಸುತ್ತಲೂ ಹೆಣೆದುಕೊಂಡ ಕಥೆಗಳು ಏನೇ ಇರಲಿ, ಭಗವಾನ್ ಶಿವನಲ್ಲಿ ಅವರಿಗಿದ್ದ ಗಾಢ ವಾದ ಭಕ್ತಿ, ನಿಷ್ಠೆ, ವಿಶ್ವಾಸಗಳ ಬಗ್ಗೆ ಯಾರೂ ಸಂದೇಹ ಪಡ ಲಾರರು. ಅವೇ ಈ ಕಥೆಗಳನ್ನು ಓದಿ ನಾವು ಬೆಳೆಸಿಕೊಳ್ಳಬೇಕಾದ ಸದ್ಗುಣಗಳು. ಅಲ್ಲದೆ ಶಿವನು ನೇರವಾಗಿಯೇ ಸುಂದರರ ಜೀವನ ದಲ್ಲಿ ಪಾಲ್ಗೊಂಡು ಲೀಲೆಯಾಡಿದನು, ಸುಃಖ, ದುಃಖಗಳಲ್ಲಿ ಒಡನಾಡಿಯಾದನು; ಕಡೆಗೆ ತನ್ನೆಡೆಗೆ ಸೆಳೆದುಕೊಂಡನು. ಇದೇ ರೀತಿ ನಮಗೆ ಅರಿವಾಗದಿದ್ದರೂ ಆ ಭಗವಂತನೇ ನಮ್ಮ ಜೀವನದ ಅವಿಭಾಜ್ಯ ಅಂಗವಾಗಿದ್ದಾನೆ. ಅವನೇ ತನ್ನ ಲೀಲೆಯನ್ನು ಆಡುತ್ತ ಸುಖದುಃಖಗಳಿಗೆ ನಮ್ಮನ್ನು ಈಡು ಮಾಡುತ್ತಾನೆ. ನಮ್ಮನ್ನು ಆಟದ ಗೊಂಬೆಗಳ ಹಾಗೆ ಆಡಿಸಿ ನಲಿದಾಡುತ್ತಾನೆ. ಅದನ್ನು ತಿಳಿದುಕೊಂಡರೆ, ಸುಖದಲ್ಲಿ ನಾವು ಹಿಗ್ಗುವುದಿಲ್ಲ, ದುಃಖದಲ್ಲಿ ಕುಗ್ಗುವುದಿಲ್ಲ. ಎಂದೆಂದೂ ಅವನ ಸ್ಮರಣೆ ಮಾಡುತ್ತ ಸ್ಥಿರಚಿತ್ತ ದವರಾಗಿ ಇರುತ್ತೇವೆ. ಕಡೆಗೆ ಅವನನ್ನೇ ಹೋಗಿ ಸೇರುತ್ತೇವೆ. ಇದೇ ಸುಂದರಮೂರ್ತಿ ನಾಯನಾರರ ಸುಂದರವಾದ ಕತೆ ನಮಗೆ ನೀಡುವ ಸುಮಧುರ ಸಂದೇಶ. 

**ಕರಿಯನಿತ್ತೊಡೆ ಒಲ್ಲೆ**
**ಸಿರಿಯನಿತ್ತೊಡೆ ಒಲ್ಲೆ**
**ಹಿರಿದಪ್ಪ ರಾಜ್ಯವಿತ್ತೊಡೆ ಒಲ್ಲೆ**
**ನಿಮ್ಮ ಶರಣರ ಸೂಳುನುಡಿಯ**
**ಒಂದರೆ ಗಳಿಗೆ ಇತ್ತಡೆ**
**ನಿನ್ನನಿತ್ತೆ ಕಾಣಾ ರಾಮನಾಥಾ**

*–ದೇವರ ದಾಸಿಮಯ್ಯ*



# ಸೋದರಿ ನಿವೇದಿತಾ ಭಾಗ ೭

ಕಥೆ: ದೇವಪ್ರಸಾದ ಭಟ್ಟಾಚಾರ್ಯ ಅನುವಾದ: ಉಷಾ ಎಸ್. ಮೂರ್ತಿ ಚಿತ್ರ: ಸುನಿತಾ ವಾಸು



















ಕೂಡುವುದು, ಕಳೆಯುವುದು, ಸಮ-ಬೆಸ ಸಂಖ್ಯೆಗಳು ಮೊದಲಾದವುಗಳನ್ನು ಆಟದ ಮೂಲಕವೇ ಕಲಿಸುತ್ತಿದ್ದಳು.


ಗಣಿತ ಕಲಿಸುವ ಸಂದರ್ಭದಲ್ಲಿ ಅವರಿಗೆ ಕೇವಲ ಬೆಸ ಸಂಖ್ಯೆಗಳು ಅಥವಾ ಸಮ ಸಂಖ್ಯೆಗಳನ್ನು ಎಣಿಸುವಂತೆ ಹೇಳುತ್ತಿದ್ದಳು.


ನಂತರ ನಿಧಾನವಾಗಿ ಮಧ್ಯೆ ಒಂದೊಂದು ಸಂಖ್ಯೆಯನ್ನು ಬಿಟ್ಟು ಎಣಿಸಲು ಹೇಳುತ್ತಿದ್ದಳು.


ಉದಾ. 1, 5, ೯... ೨, ೬, 10... ಇತ್ಯಾದಿ.


ಈ ವಿಧಾನದಿಂದಾಗಿ ಚಿಕ್ಕಮಕ್ಕಳ ಜ್ಞಾಪಕ ಶಕ್ತಿ ಹಾಗೂ ಆಲೋಚನಾ ಶಕ್ತಿ ವೃದ್ಧಿಯಾಯಿತು.


ಚಿತ್ರಕಲೆಯನ್ನು ಕಲಿಸುವ ಸಂದರ್ಭದಲ್ಲಿ ಪ್ರತಿ ಹುಡುಗಿಗೂ ಒಂದು ಬ್ರಷ್ ಹಾಗೂ ಪೆನ್ಸಿಲ್ ಅನ್ನು ಕೊಟ್ಟಳು.


ಜೊತೆಗೆ ಬಣ್ಣ ಮತ್ತು ಒಂದು ಆರ್ಟ್ ಪೇಪರ್ ಅನ್ನೂ ನೀಡಿದಳು.


ಅವಳೂ ಸಹ ಒಂದು ಬ್ರಷ್ ಹಾಗೂ ಪೇಪರ್ ಅನ್ನು ತೆಗೆದುಕೊಂಡಳು.


ಚಿತ್ರ ಬಿಡಿಸುವಾಗ, ಮೊದಲು ಅದನ್ನು ಪೆನ್ಸಿಲ್‌ನಿಂದ ಬರೆದು ತೋರಿಸುತ್ತಿದ್ದಳು.


ಕೈಯಲ್ಲಿ ಬ್ರಷ್ ಹಾಗೂ ಪೇಪರ್ ಹಿಡಿದುಕೊಂಡು ಪ್ರತಿ ಹುಡುಗಿಯ ಹತ್ತಿರವೂ ಹೋಗಿ ಚಿತ್ರ ಬರೆದು ತೋರಿಸುತ್ತಿದ್ದಳು.

ಮೊದಮೊದಲು ಹುಡುಗಿಯರು ತಿಳಿಯದೆ ತಮ್ಮ ಪೆನ್ಸಿಲ್‌ನ ಹಿಂಭಾಗದಿಂದ ನಿವೇದಿತಾ ತೋರಿಸಿದಂತೆ ವೃತ್ತ ಬರೆದರು.



ನಂತರ ಅವರು ಸುಲಭವಾಗಿ, ಬೇಗಬೇಗನೆ ಬರೆಯುವುದನ್ನು ಕಲಿತರು.



'ಗೆರೆಯನ್ನಾಗಲೀ ವೃತ್ತವನ್ನಾಗಲೀ ಎಳೆಯುವಾಗ ಅನುಮಾನವಿಲ್ಲದೆ, ಬೇಗನೆ ಸ್ವಲ್ಪವೂ ತಡೆಯಿಲ್ಲದೆ ಬರೆಯಬೇಕು' ಎಂದು ಹೇಳಿದಳು.



ಹಂತ ಹಂತವಾಗಿ ಅವರಿಗೆ ಅನೇಕ ಬಗೆಯ ಚಿತ್ರಗಳನ್ನು ಬರೆಯುವುದನ್ನು ತೋರಿಸಿದಳು.



ಉತ್ತರ ಹೇಳಲು ಸಾಧ್ಯವಾಗದಿರುವ ಹುಡುಗಿಯರಿಗಾಗಿ ನಿವೇದಿತಾ ಒಂದು ಹೊಸ ವಿಧಾನವನ್ನು ರೂಪಿಸಿದಳು.



ಅವಳನ್ನು ಬೇರೆಬೇರೆ ರೀತಿಯಿಂದ ಪ್ರಶ್ನೆ ಕೇಳಿ, ಅವರೇ ಉತ್ತರ ಹುಡುಕಿ ಹೇಳುವಂತೆ ಮಾಡುವ ವಿಧಾನವನ್ನು ಅಳವಡಿಸಿಕೊಂಡಳು.



ಹೀಗೆ ಪ್ರಶ್ನೆ ಮಾಡುವಾಗ ಬೇರೆಯವರಿಗೆ ಉತ್ತರ ಗೊತ್ತಿದ್ದರೂ ಅವರು ಹೇಳಬಾರದೆಂದು ನಿಯಮ ಮಾಡಿದಳು.

ಮುಂದಿನ ಸಂಚಿಕೆಗೆ..








# ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ವಾರ್ಷಿಕೋತ್ಸವ

ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ೨೦೧೭ನೇ ಸಾಲಿನ ವಾರ್ಷಿಕೋತ್ಸವವು ಫೆಬ್ರುವರಿ ೨೪ರಿಂದ ೨೭ರ ವರೆಗೆ ನಡೆದು, ೨೮ರಂದು **ಶ್ರೀರಾಮಕೃಷ್ಣರ ಜನ್ಮದಿನೋತ್ಸವದೊಂದಿಗೆ** ಕೊನೆಗೊಂಡಿತು. ಯುವಶಿಬಿರ, ಭಕ್ತಸಮ್ಮೇಳನ ಹಾಗೂ ನಾರಾಯಣ ಸೇವೆ ಕಾರ್ಯಕ್ರಮಗಳೊಂದಿಗೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆದಿರುವುದು ಈ ಬಾರಿಯ ವಿಶೇಷವಾಗಿದೆ.

**ಫೆಬ್ರುವರಿ ೨೪, ಮಹಾಶಿವರಾತ್ರಿ:** ಶಿವರಾತ್ರಿ ಆಚರಣೆಯ ಅಂಗವಾಗಿ **‘ಗಿರಿಜಾಕಲ್ಯಾಣ’** ಎಂಬ ಸಂಗೀತರೂಪಕವನ್ನು ಶ್ರೀಮತಿ ವಾಣಿ ವಾದಿರಾಜ್ ಹಾಗೂ ವೃಂದದವರು ನಡೆಸಿಕೊಟ್ಟರು.

**ಫೆಬ್ರುವರಿ ೨೫, ‘ಸ್ವಾಮಿ ವಿವೇಕಾನಂದರ ದಿನ’:** ಫೆಬ್ರುವರಿ ೨೫ರಂದು ನಡೆದ **ಯುವಶಿಬಿರದಲ್ಲಿ** ಸ್ವಾಮಿ ಅನುಪಮಾನಂದಜಿ ಹಾಗೂ ಶ್ರೀ ಚಕ್ರವರ್ತಿ ಸೂಲಿಬೆಲೆ ಉಪನ್ಯಾಸಗಳನ್ನು ನೀಡಿದರು. ಸಾಯಂಕಾಲ ಚೆನ್ನೈ **ರಾಮಕೃಷ್ಣ ಹರಿಭಜನ ಮಂಡಳಿಯ** ಸದಸ್ಯರಿಂದ ವಿಶೇಷ ಭಜನೆಯ ಕಾರ್ಯಕ್ರಮ ನಡೆಯಿತು.

**ಫೆಬ್ರುವರಿ ೨೫, ‘ಶ್ರೀಮಾತೆ ಶಾರದಾದೇವಿ ದಿನ’**: ಈ ದಿನ ನಡೆದ **ಭಕ್ತ ಸಮ್ಮೇಳನದಲ್ಲಿ** ಸ್ವಾಮಿ ಅನುಪಮಾನಂದಜಿ, ಶ್ರೀಮತಿ ಪ್ರೋಷಿಣಿ ಉಪನ್ಯಾಸ ನೀಡಿದರು. ಸಾಯಂಕಾಲ ಪಂಡಿತ್ ಶ್ರೀನಾಗರಾಜ್‌ರಾವ್ ಹವಾಲ್ದಾರ್ ಹಾಗೂ ಬಳಗದವರಿಂದ **ಹಿಂದಸ್ತಾನೀ ಶಾಸ್ತ್ರೀಯ ಸಂಗೀತ** ಹಾಗೂ ಭಜನೆಗಳು ನಡೆದವು.

**ಫೆಬ್ರುವರಿ ೨೭, ‘ಭಗಿನಿ ನಿವೇದಿತಾ ದಿನ’**: ಈ ದಿನ ೩೦೦ ಮಂದಿ ಮಹಾನಗರ ಪಾಲಿಕೆಯ ನಗರಬಂಧುಗಳಿಗೆ ವಿಶೇಷ ಕಾಣಿಕೆ, ಪೂಜೆ ಸಲ್ಲಿಸುವ ಮೂಲಕ **‘ನಾರಾಯಣ ಸೇವೆ’** ಮಾಡಲಾಯಿತು. ಸ್ವಾಮಿ ನಿತ್ಯಸ್ಥಾನಂದಜಿಯವರು ಆಶೀರ್ವಚನ ನೀಡಿದರು. ಸಾಯಂಕಾಲ ಶ್ರೀ ದತ್ತಾತ್ರೇಯ ವೇಳಂಕರ್ ಅವರಿಂದ **‘ಭಗವಾನ್ ಶ್ರೀರಾಮಕೃಷ್ಣ’** ಎಂಬ ಕಥಾಕೀರ್ತನ ನಡೆಯಿತು.





**ಫೆಬ್ರುವರಿ ೨೮, ಶ್ರೀರಾಮಕೃಷ್ಣ ಜಯಂತಿ :** ಈ ದಿನ ನಡೆದ ಶ್ರೀರಾಮಕೃಷ್ಣರ ಜನ್ಮದಿನೋತ್ಸವದ ಕಾರ್ಯಕ್ರಮದೊಂದಿಗೆ ವಾರ್ಷಿಕೋತ್ಸವವು ಸಂಪೂರ್ಣಗೊಂಡಿತು. ವೇದಮಂತ್ರ , ಭಜನೆ, ವಿಶೇಷಪೂಜೆ, ಹೋಮ, ಪ್ರವಚನಗಳೊಂದಿಗೆ ನಡೆದ ಇಡೀ ದಿನದ ಕಾರ್ಯಕ್ರಮದಲ್ಲಿ ನೂರಾರು ಮಂದಿ ಭಕ್ತರು ಭಾಗವಹಿಸಿದ್ದರು. ಭಕ್ತರಿಗೆ ಮಧ್ಯಾಹ್ನ ಪ್ರಸಾದ ವಿತರಣೆ ನಡೆಯಿತು.







Managing Editor : Swami Atmajnananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್




## ಅಂತರಾಷ್ಟ್ರೀಯ ವಿಶೇಷ ಪ್ರವಾಸಗಳು

ಅಮೆರಿಕಾ



### 18 ದಿನಗಳ ಅಮೇರಿಕಾ ಹಾಗೂ ಬಹಮಾಸ್ ಕ್ರೂಸ್ ಪ್ರವಾಸ

ಮೇ, ಜೂನ್, ಜುಲೈ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್,
ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್ಕೋ, ಆರ್ಲ್ಯಾಂಡೊ, ಬಹಮಾಸ್‌ಕ್ರೂಸ್

ಸಿಂಗಾಪುರ್



### 7 ದಿನಗಳ ಸಿಂಗಾಪುರ-ಮಲೇಶಿಯ ಪ್ರವಾಸ

ಏಪ್ರಿಲ್, ಮೇ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ,
ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್,
ಯುನಿವರ್ಸಲ್ ಸ್ಟುಡಿಯೋ
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ,
ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

ಲಂಡನ್



### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ

ಏಪ್ರಿಲ್, ಮೇ
ಜೂನ್, ಜುಲೈ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್
ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

ಜಪಾನ್



### 7 ದಿನಗಳ ಜಪಾನ್ ಪ್ರವಾಸ

ಸೆಪ್ಟೆಂಬರ್
ಅಕ್ಟೋಬರ್

ಹೈ ಸ್ಪೀಡ್ ಬುಲೆಟ್ ರೈಲಿನಲ್ಲಿ ಪ್ರಯಾಣದ ಅನುಭವ ಹಾಗೂ
ಜಪಾನ್ ರಾಜಧಾನಿ ಟೋಕಿಯೋ
ಪ್ರವಾಸ ಸ್ಥಳ : ಒಸಾಕಾ, ಹಿರೋಷಿಮಾ, ಕ್ಯೋಟೋ, ಮೌಂಟ್‌ಫುಜಿ
ನಾರ ನಗರ ವೀಕ್ಷಣೆ ಹಾಗೂ ಇತರೆ

ಚೈನಾ



### 10 ದಿನಗಳ ಚೈನಾ, ಹಾಂಕಾಂಗ್, ಮಕಾವ್ ಪ್ರವಾಸ

ಏಪ್ರಿಲ್, ಮೇ

ಆಕ್ರೋಬೆಟಿಕ್ ಶೋ, ಓಷನ್ ಪಾರ್ಕ್, ಬೀಜಿಂಗ್ ನಗರ ವೀಕ್ಷಣೆ,
ಶಾಂಘೈ ನಗರ ವೀಕ್ಷಣೆ, ಏಳು ಅದ್ಭುತಗಳಲ್ಲಿ ಒಂದಾದ ಚೀನಾ
ಮಹಾಗೋಡೆ (Great Wall of China) ಸಮ್ಮರ್ ಪ್ಯಾಲೇಸ್,
ಹಾಂಕಾಂಗ್ ಮ್ಯೂಸಿಯಂ ಮತ್ತು ಮಕಾವ್ ಹಾಗೂ ಇತರೆ.

ರಷ್ಯಾ



### 7 ದಿನಗಳ ರಷ್ಯಾ ಪ್ರವಾಸ

ಮೇ, ಜೂನ್

**ಮಾಸ್ಕೋ** : ಕ್ರೆಮ್‌ಲಿನ್ ಗ್ರೌಂಡ್, ರೆಡ್ ಸ್ಕ್ವೇರ್, ರಷ್ಯಾ ಸರ್ಕಸ್,
ಅಂಡರ್‌ಗ್ರೌಂಡ್ ಟೂರ್ ಆಫ್ ಮಾಸ್ಕೊ (ಮೆಟ್ರೊ), ಸಿಟಿ ಟೂರ್
**ಸೆಂಟ್ ಪೀಟರ್ಸ್‌ಬರ್ಗ್** : ಗ್ರ್ಯಾಂಡ್ ಪ್ಯಾಲೇಸ್, ಪೀಟರ್ ಓಫ್ ಗಾರ್ಡನ್,
ಹೆರ್ಮಿಟೇಜ್ ಮ್ಯೂಸಿಯಂ, ನೇವ ಬೋಟ್ ರೈಡ್, ಸೈಂಟ್ ಐಸಾಕ್ಸ್ ಕೆಥಡ್ರಲ್, ಸಿಟಿ ಟೂರ್

**ಪ್ರಧಾನ ಕಛೇರಿ : ಬಸವನಗುಡಿ**

ನಂ. 98, 1ನೇ ಮಹಡಿ, ಡಿವಿಜಿ ರಸ್ತೆ
ಬಸವನಗುಡಿ, ಬೆಂಗಳೂರು – 560004.
ಫೋನ್: 080-26670646, 26621983
ಮೊಬೈಲ್ : 9900080799, 9900080795

**ಶಾಖಾ ಕಛೇರಿ : ಮಲ್ಲೇಶ್ವರಂ**

ನಂ.198, 1ನೇ ಮಹಡಿ, 11ನೇ ಕ್ರಾಸ್, ಯತಿರಾಜಮಠ
ಬಿಲ್ಡಿಂಗ್, ಮಲ್ಲೇಶ್ವರಂ, ಬೆಂಗಳೂರು – 560003.
ಫೋನ್: 080-41204155, 23445559
ಮೊಬೈಲ್ : 9900080793, 9900080794

**www.orchidtours.net**

